# ಐತರೇಯೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಪ್ರಸ್ತಾವನೆ

ಋಗ್ವೇದಕ್ಕೆ ಸೇರಿದ ಐತರೇಯೋಪನಿಷತ್ತು ಐತರೇಯಾರಣ್ಯಕದ ಭಾಗವಾಗಿದೆ. ಐತರೇಯಾರಣ್ಯಕದಲ್ಲಿ ಒಟ್ಟು ಐದು ಆರಣ್ಯಕಗಳಿವೆ. ಐದು ಅಧ್ಯಾಯಗಳನ್ನು ಒಳಗೊಂಡಿರುವ ಮೊದಲನೆಯ ಆರಣ್ಯಕದಲ್ಲಿ ಗವಾಮಯನಸತ್ರಕ್ಕೆ ಸಂಬಂಧಿಸಿದ ಮಹಾವ್ರತವೆಂಬ ಕರ್ಮದ ವಿವರಣೆಯಿದೆ. ಎರಡನೆಯ ಆರಣ್ಯಕದಲ್ಲಿ ಏಳು ಅಧ್ಯಾಯಗಳಿವೆ. ಈ ಆರಣ್ಯಕದ ನಾಲ್ಕನೆಯ, ಐದನೆಯ ಮತ್ತು ಆರನೆಯ ಅಧ್ಯಾಯಗಳೇ ಐತರೇಯೋಪನಿಷತ್ತು. ಎರಡು ಅಧ್ಯಾಯಗಳನ್ನು ಒಳಗೊಂಡಿರುವ ಮೂರನೆಯ ಆರಣ್ಯಕದಲ್ಲಿ ಸಂಹಿತಾವಿಷಯಕವಾದ ಉಪಾಸನೆಯನ್ನು ಹೇಳಿದೆ. ಒಂದೇ ಅಧ್ಯಾಯವನ್ನು ಒಳಗೊಂಡಿರುವ ನಾಲ್ಕನೆಯ ಆರಣ್ಯಕದಲ್ಲಿ ಮಹಾನಾಮ್ನೀ ಮಂತ್ರಗಳ ಪಟ್ಟಿಯು ಬರುತ್ತದೆ. ಮೂರು ಅಧ್ಯಾಯಗಳನ್ನು ಒಳಗೊಂಡಿರುವ ಕೊನೆಯ ಆರಣ್ಯಕದಲ್ಲಿ ಪುನಃ ಮಹಾವ್ರತದ ವಿಚಾರವಿದೆ.

ಐತರೇಯಾರಣ್ಯಕ-ಬ್ರಾಹ್ಮಣಗಳ ಪ್ರಖ್ಯಾತ ಋಷಿಯಾದ ಮಹೀದಾಸ ಐತರೇಯನ ವಿಷಯವಾಗಿ ಅನೇಕ ಕಥೆಗಳಿವೆ. ಇವನು ೧೧೬ ವರ್ಷಗಳವರೆಗೆ ಬದುಕಿದ್ದನೆಂದು ಛಾಂದೋಗ್ಯೋಪನಿಷತ್ತಿನಲ್ಲಿ (೩,೧೬,೭) ಹೇಳಿದೆ. ಇವನು ಇತರಾ ಎಂಬವಳ ಮಗನಾದುದರಿಂದ ಐತರೇಯ ಎಂಬ ಹೆಸರನ್ನು ಪಡೆದಿರಬಹುದು.

ಐತರೇಯೋಪನಿಷತ್ತಿನ ಮೊದಲನೆಯ ಅಧ್ಯಾಯಲ್ಲಿ ಮೂರು ಖಂಡಗಳಿವೆ. ಈ ಅಧ್ಯಾಯದ ವಾಕ್ಯಾರ್ಥವನ್ನು ಶ್ರೀಶಂಕರಾಚಾರ್ಯರು ಹೀಗೆ ನಿರೂಪಿಸಿದ್ದಾರೆ: 'ಜಗತ್ತಿನ ಉತ್ಪತ್ತಿ-ಸ್ಥಿತಿ-ಪ್ರಳಯಗಳನ್ನು ಮಾಡುವವನೂ, ಅಸಂಸಾರಿಯೂ, ಸರ್ವಜ್ಞನೂ, ಸರ್ವಶಕ್ತಿಯುಳ್ಳವನೂ, ಸರ್ವವಿದನೂ ಆದ ಪರಮಾತ್ಮನು ಈ ಜಗತ್ತನ್ನೆಲ್ಲ—ತನಗಿಂತ ಭಿನ್ನವಾದ ಬೇರೊಂದು ವಸ್ತುವನ್ನು ಉಪಾದಾನವಾಗಿ ತೆಗೆದುಕೊಳ್ಳದೆ — ಆಕಾಶಾದಿಕ್ರಮದಿಂದ ಸೃಷ್ಟಿಸಿದನು; ಅನಂತರ ಆತ್ಮಪ್ರಬೋಧಕ್ಕಾಗಿ ಪ್ರಾಣವೇ ಮೊದಲಾದುವುಗಳಿಂದ ಕೂಡಿರುವ ಸರ್ವಶರೀರಗಳನ್ನೂ ತಾನೇ ಪ್ರವೇಶಿಸಿದನು ಮತ್ತು ಪ್ರವೇಶಿಸಿದ ಮೇಲೆ ಯಥಾರ್ಥವಾದ ತನ್ನ ಆತ್ಮನನ್ನೇ "ಈ ಬ್ರಹ್ಮವೇ

ಆಗಿರುತ್ತೇನೆ” **ಇದಂ ಬ್ರಹ್ಮಾಸ್ಮಿ** ಎಂದು ಸಾಕ್ಷಾತ್ತಾಗಿ ಅರಿತುಕೊಂಡನು. ಆದುದರಿಂದ ಸರ್ವಶರೀರಗಳಲ್ಲಿಯೂ ಅವನೊಬ್ಬ ಆತ್ಮನೇ ಹೊರತು ಬೇರೊಬ್ಬನಿಲ್ಲ. ಆದಕಾರಣ ಎಲ್ಲರೂ “ಅವನು ನನ್ನ ಆತ್ಮನು” **ಸ ಮ ಆತ್ಮಾ** (ಐತರೇಯಾರಣ್ಯಕ, ೩, ೨, ೪), “ನಾನು ಬ್ರಹ್ಮನಾಗಿದ್ದೇನೆ” **ಅಹಂ ಬ್ರಹ್ಮಾಸ್ಮಿ** (ಬೃಹದಾರಣ್ಯಕೋಪನಿಷತ್, ೧, ೪, ೧೦) ಎಂದು ಅರಿಯಬೇಕು.’

ನಿಜವಾಗಿ ನೋಡಿದರೆ ಪ್ರವೇಶಶ್ರುತಿಯು ಅರ್ಥವಾದವು. ಏಕೆಂದರೆ ಇಲ್ಲಿ ಆತ್ಮಜ್ಞಾನೋಪದೇಶವೇ ಮುಖ್ಯೋದ್ದೇಶವಾಗಿದೆ. ಮಹಾಮಾಯಾವಿಯೂ, ಸರ್ವಶಕ್ತನೂ, ಸರ್ವಜ್ಞನೂ ಆದ ದೇವನು ಮಾಯಾವಿಯಂತೆ ಇದೆಲ್ಲವನ್ನೂ ಸೃಷ್ಟಿಸಿ ಪ್ರವೇಶಿಸಿರುತ್ತಾನೆ. ಜ್ಞಾನವು ಸುಖವಾಗಿ ಉತ್ಪನ್ನವಾಗಲೆಂದು ವ್ಯವಹಾರಕ್ಕೆ ಅನುಗುಣವಾಗಿ ಆಖ್ಯಾಯಿಕೆಯನ್ನು ಹೇಳಿದೆ. ಏಕೆಂದರೆ ಸೃಷ್ಟಿಗೆ ಸಂಬಂಧಪಟ್ಟ ಆಖ್ಯಾಯಿಕೆಗಳಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ. ಆದರೆ ಏಕಾತ್ಮಸ್ವರೂಪಜ್ಞಾನದಿಂದ ಅಮೃತತ್ವವೆಂಬ ಫಲವುಂಟಾಗುವುದೆಂಬುದು ಎಲ್ಲ ಉಪನಿಷತ್ತುಗಳಲ್ಲಿಯೂ ಪ್ರಸಿದ್ಧವಾಗಿದೆ.

ಎರಡನೆಯ ಅಧ್ಯಾಯದಲ್ಲಿ ಒಂದೇ ಖಂಡವಿದೆ. ಜೀವನಿಗೆ ಜನನ ಮರಣಗಳು ನದಿಯ ಸ್ರೋತದಂತೆ ಪುನಃ ಪುನಃ ಉಂಟಾಗುತ್ತವೆ. ಇಂತಹ ಜೀವನಿಗೆ ವೈರಾಗ್ಯವನ್ನು ಉಂಟುಮಾಡಲು ಇವನು ಹೊಂದುವ ಮೂರು ಅವಸ್ಥೆಗಳನ್ನು (ಅಥವಾ ಜನ್ಮಗಳನ್ನು) ಶ್ರುತಿಯು ಹೇಳುತ್ತದೆ: ರೇತೋರೂಪದಿಂದ ಗರ್ಭವಾಗುವುದು ಸಂಸಾರಿಯ ಮೊದಲನೆಯ ಅವಸ್ಥೆಯು; ಅನಂತರ ಮಾತೃಗರ್ಭದಿಂದ ಶಿಶುರೂಪದಲ್ಲಿ ಹೊರಗೆ ಬರುವುದು ಎರಡನೆಯ ಅವಸ್ಥೆಯು; ಕೊನೆಗೆ ಜರಾಜೀರ್ಣನಾಗಿ ಜೀವನವನ್ನು ಮುಗಿಸಿ ಶರೀರವನ್ನು ಬಿಟ್ಟ ಮೇಲೆ ಮತ್ತೊಂದು ಶರೀರವನ್ನು ಪಡೆದುಕೊಳ್ಳುವುದು ಮೂರನೆಯ ಅವಸ್ಥೆಯು. ಆದರೆ ಯಾವ ಅವಸ್ಥೆಯಲ್ಲಿಯೇ ಇರಲಿ, ಸಂಸಾರಿಯು ತನ್ನ ಆತ್ಮಸ್ವರೂಪವನ್ನು ಅರಿತುಕೊಂಡರೆ ಸರ್ವಸಂಸಾರಬಂಧನಗಳಿಂದ ಮುಕ್ತನಾಗಿ ಕೃತಕೃತ್ಯನಾಗುತ್ತಾನೆ. ವಾಮದೇವನು ಗರ್ಭದಲ್ಲಿರುವಾಗಲೇ ಆತ್ಮಜ್ಞಾನವನ್ನು ಹೊಂದಿ ಅವಿದ್ಯಾಕೃತವಾದ ಶರೀರವನ್ನು ನಾಶಪಡಿಸಿಕೊಂಡು ಅಮೃತನಾದನೆಂದು ಶ್ರುತಿಯು ಕೊನೆಯಲ್ಲಿ ಹೇಳುತ್ತದೆ.

ಮೂರನೆಯ ಅಧ್ಯಾಯದಲ್ಲಿಯೂ ಒಂದೇ ಖಂಡವಿದೆ. ಶ್ರುತಿಯಲ್ಲಿ ಉಲ್ಲೇಖಿಸಿರುವಂತೆ ವಾಮದೇವನು ಅರಿತುಕೊಂಡ ಆತ್ಮಸ್ವರೂಪವು ಯಾವುದು? ಇಬ್ಬರು ಬ್ರಹ್ಮರು ಶರೀರವನ್ನು ಪ್ರವೇಶಿಸಿರುವರೆಂದು ಶ್ರುತಿಯು ಹೇಳುತ್ತದೆ. ಒಬ್ಬ ಬ್ರಹ್ಮನು ಮುಂಗಾಲುಗಳ ಮೂಲಕ ಶರೀರವನ್ನು ಪ್ರವೇಶಿಸಿದ್ದಾನೆ; ಎರಡನೆಯವನು ತಲೆಬುರುಡೆಯನ್ನು ಸೀಳಿಕೊಂಡು ಒಳಗೆ ಪ್ರವೇಶಿಸಿದ್ದಾನೆ. ಇವರಿಬ್ಬರಲ್ಲಿ ನಿಜವಾದ ಆತ್ಮನು ಯಾವನು? ಯಾವನು ಮುಂಗಾಲುಗಳ ಮೂಲಕ ಪ್ರವೇಶಿಸಿ ಅರಿಯಲು ಕರಣವಾಗಿರುವನೋ ಅವನು ನಿಜವಾದ ಆತ್ಮನಾಗಿರಲಾರನು. ಪರಿಶೇಷನ್ಯಾಯದಿಂದ ಯಾವ ಜ್ಞಾತೃವಿಗೆ ಅರಿಯಲು ಸಾಧನವಾಗಿ ಹೃದಯಮನೋರೂಪವಾದ ಕರಣದ ಬೇರೆ ಬೇರೆ ವೃತ್ತಿಗಳು ಉಂಟಾಗುವುವೊ ಅವನೇ ನಮ್ಮ ಆತ್ಮನು, ಅವನನ್ನೇ ನಾವು ಉಪಾಸಿಸಬೇಕು.

ಈ ಪರಬ್ರಹ್ಮವು ಪ್ರಜ್ಞಾನದ ಸ್ವರೂಪವಾಗಿದೆ. ಅಂತಃಕರಣವೃತ್ತಿಗಳಿಂದ ಪ್ರಜ್ಞಾನಕ್ಕೆ ಅನೇಕ ಹೆಸರುಗಳು ಬಂದಿವೆ. ಈ ಪ್ರಜ್ಞಾರೂಪವಾದ ಆತ್ಮವೇ ಬ್ರಹ್ಮ, ಇಂದ್ರ, ಪ್ರಜಾಪತಿ ಎಂಬ ಹೆಸರುಗಳಿಂದ ಕರೆಯಲ್ಪಡುತ್ತದೆ. ಚರಾಚರವಸ್ತುಗಳೆಲ್ಲವೂ ತಮ್ಮ ಸೃಷ್ಟಿ-ಸ್ಥಿತಿ-ಲಯಗಳಿಗೆ ಪ್ರಜ್ಞಾನವನ್ನೇ ಆಶ್ರಯಿಸಿರುತ್ತವೆ. ಪ್ರಜ್ಞಾನವೇ ಬ್ರಹ್ಮವು. ಈ ಪ್ರಜ್ಞಾನರೂಪವಾದ ಬ್ರಹ್ಮವನ್ನು ಅರಿತುಕೊಂಡವನು ಈ ಲೋಕವನ್ನು ದಾಟಿ ಅಮೃತನಾಗುತ್ತಾನೆ.

ಈ ಮಾಲೆಯಲ್ಲಿ ಪ್ರಕಟವಾಗಿರುವ ಇತರ ಉಪನಿಷತ್ತುಗಳಂತೆ ಇಲ್ಲಿಯೂ ಕೂಡ ತಾತ್ಪರ್ಯ-ಟಿಪ್ಪಣಿಗಳು ಶಾಂಕರಭಾಷ್ಯವನ್ನವಲಂಬಿಸಿವೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು

ಸ್ವಾಮಿ ಆದಿದೇವಾನಂದ

# ಶಾಂತಿಪಾಠ

ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ । ವೇದಸ್ಯ ಮ ಆಣೀ ಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನಾಹೋರಾತ್ರಾನ್ ಸಂದಧಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು ತದ್ವಕ್ತಾರಮವತು । ಅವತು ಮಾಮವತು ವಕ್ತಾರಮ್ ಅವತು ವಕ್ತಾರಮ್ ॥

ಓಂ ಶಾಂತಿಃ ಶಾಂತಿಃ ಶಾಂತಿಃ

[ಪ್ರತಿಪದಾರ್ಥ-ತಾತ್ಪರ್ಯಗಳಿಗೆ ಈ ಉಪನಿಷತ್ತಿನ ಕೊನೆಯ ಭಾಗವನ್ನು ನೋಡಿ]

# ಐತರೇಯೋಪನಿಷತ್

## ಮೊದಲನೆಯ ಅಧ್ಯಾಯ

### ಮೊದಲನೆಯ ಖಂಡ

ಹರಿಃ ಓಮ್ । ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥ ೧ ॥

ಅಗ್ರೇ ವೈ=ಮೊದಲು ಇದಂ=ಇದು ಆತ್ಮಾ ಏಕಃ ಏವ=ಆತ್ಮನೊಬ್ಬನೇ ಆಸೀತ್=ಆಗಿತ್ತು. ಅನ್ಯತ್ ಕಿಂಚನ ಮಿಷತ್=ವೀಕ್ಷಣಾದಿಕ್ರಿಯೆಯುಳ್ಳ ಬೇರೆ ಯಾವುದೂ ನ [ಆಸೀತ್]=ಇರಲಿಲ್ಲ. ಸಃ=ಅವನು ಈಕ್ಷತ=ಆಲೋಚಿಸಿದನು—ಲೋಕಾನ್ ನು=ಲೋಕಗಳನ್ನು ಸೃಜೈ=ಸೃಷ್ಟಿಸುವೆನು, ಇತಿ=ಎಂದು.

೧. ಹರಿಃ ಓಮ್. ಮೊದಲು[೧] ಇದು[೨] ಆತ್ಮನೊಬ್ಬನೇ[೩] ಆಗಿತ್ತು.[೪] ವೀಕ್ಷಣವೇ ಮೊದಲಾದ ಕ್ರಿಯೆಯುಳ್ಳ ಬೇರೆ ಯಾವುದೂ ಇರಲಿಲ್ಲ.[೫] 'ಲೋಕಗಳನ್ನು ಸೃಷ್ಟಿಸುವೆನು'[೬] ಎಂದು ಅವನು ಆಲೋಚಿಸಿದನು.

[[೧] ಜಗತ್ತಿನ ಸೃಷ್ಟಿಗೆ ಮೊದಲು.

[೨] ನಾಮ, ರೂಪ, ಕರ್ಮ ಎಂಬ ಭೇದಗಳಿಂದ ಭಿನ್ನವಾದ ಜಗತ್ತು.

[೩] ಆತ್ಮನೆಂಬ ಪದವು ಆಪ್ (ವ್ಯಾಪಿಸು), ಅದ್ (ತಿನ್ನು), ಅತ್ (ಹೋಗು) ಎಂಬ ಧಾತುಗಳಿಂದ ಬಂದಿದೆ. ಸರ್ವಜ್ಞನೂ, ಸರ್ವಶಕ್ತಿಯುಳ್ಳವನೂ, ಹಸಿವೇ ಮೊದಲಾದ ಸರ್ವಸಂಸಾರಧರ್ಮರಹಿತನೂ, ನಿತ್ಯಶುದ್ಧಬುದ್ಧಮುಕ್ತವಾದ ಸ್ವಭಾವದವನೂ, ಜನ್ಮಮುಪ್ಪುಗಳಿಲ್ಲದವನೂ, ಅಮರನೂ, ಅಮೃತನೂ, ಅಭಯನೂ, ಅದ್ವಯನೂ, ಪರನೂ ಆದವನೇ ಆತ್ಮನು.

[೪] ಈಗಲೂ ಕೂಡ ಅದೇ ಆತ್ಮನಿಲ್ಲ ಎಂಬ ಅರ್ಥವಲ್ಲ. ಈಗಲೂ ಆ ಆತ್ಮನೊಬ್ಬನೇ ಇದ್ದರೂ ಸ್ವಲ್ಪ ವಿಶೇಷವಿದೆ: ಸೃಷ್ಟಿಗೆ ಮೊದಲು ನಾಮರೂಪಭೇದಗಳಿಂದ ವ್ಯಾಕೃತವಾಗದ ಮತ್ತು ಆತ್ಮಭೂತವಾದ ಜಗತ್ತು 'ಆತ್ಮನು' ಎಂಬ ಒಂದೇ ಶಬ್ದಕ್ಕೂ ಒಂದೇ ಪ್ರತ್ಯಯಕ್ಕೂ ವಿಷಯವಾಗಿತ್ತು. ಈಗ ನಾಮರೂಪಗಳಿಂದ ವ್ಯಾಕೃತವಾಗಿರುವುದರಿಂದ ಅನೇಕ ಶಬ್ದಗಳಿಗೂ ಪ್ರತ್ಯಯಗಳಿಗೂ, ಆತ್ಮನೆಂಬ ಒಂದೇ ಶಬ್ದಕ್ಕೂ ಪ್ರತ್ಯಯಕ್ಕೂ ಗೋಚರವಾಗಿರುತ್ತದೆ.

[೫]ಸಾಂಖ್ಯರ ಮತ್ತು ಕಾಣಾದರ ಮತಗಳ ಪ್ರಕಾರ ಸ್ವತಂತ್ರವಾದ ಪ್ರಧಾನ ಮತ್ತು ಅಣುಗಳು ಇರುವ ಹಾಗೆ ಇಲ್ಲಿ ಆತ್ಮನಿಗಿಂತ ಭಿನ್ನವಾದ ಯಾವ ವಸ್ತುವೂ ಇರಲಿಲ್ಲ.

[೬]'ಅಂಭಸ್ಸು ಮೊದಲಾದ ಪ್ರಾಣಿಗಳ ಕರ್ಮಫಲೋಪಭೋಗಸ್ಥಾನಗಳನ್ನು ಸೃಷ್ಟಿಸುವೆನು.' ಪರಮಾತ್ಮನು ಸರ್ವಜ್ಞಸ್ವಭಾವನಾದುದರಿಂದ ಸೃಷ್ಟಿಸಲು ಅವನಿಗೆ ಇಂದ್ರಿಯಾದಿಗಳ ಆವಶ್ಯಕತೆಯಿಲ್ಲ; 'ಕೈಕಾಲುಗಳಿಲ್ಲದೆ ವೇಗವಾಗಿ ನಡೆಯುತ್ತಾನೆ, ಹಿಡಿದುಕೊಳ್ಳುತ್ತಾನೆ' ಅಪಾಣಿಪಾದೋ ಜವನೋ ಗ್ರಹೀತಾ ಎಂದು ಮಂತ್ರ ವರ್ಣವು (ಶ್ವೇತಾಶ್ವತರೋಪನಿಷತ್, ೩, ೧೯) ಹೇಳುತ್ತದೆ.]

**ಸ ಇಮಾಂಲ್ಲೋಕಾನಸೃಜತ — ಅಂಭೋ ಮರೀಚೀರ್ಮರ-ಮಾಪೋಽದೋಽಂಭಃ ಪರೇಣ ದಿವಂ, ದ್ಯೌಃ ಪ್ರತಿಷ್ಠಾಽಂತರಿಕ್ಷಂ ಮರೀಚಯಃ । ಪೃಥಿವೀ ಮರೋ, ಯಾ ಅಧಸ್ತಾತ್ತಾ ಆಪಃ ॥ ೨ ॥**

**ಸಃ**=ಅವನು **ಇಮಾನ್ ಲೋಕಾನ್**=ಈ ಲೋಕಗಳನ್ನು **ಅಸೃಜತ**=ಸೃಷ್ಟಿಸಿದನು: **ಅಂಭಃ**=ಅಂಭೋಲೋಕವನ್ನು, **ಮರೀಚೀಃ**=ಮರೀಚಿಲೋಕಗಳನ್ನು, **ಮರಂ**=ಮರಲೋಕವನ್ನು, **ಆಪಃ**=ಆಪೋಲೋಕವನ್ನು; **ಅದಃ**=ಆ **ಅಂಭಃ**=ಅಂಭೋಲೋಕವು **ಪರೇಣ ದಿವಂ**=ದ್ಯುಲೋಕದ ಆಚೆಗಿರುವುದು; **ದ್ಯೌಃ**=ದ್ಯುಲೋಕವು [**ತಸ್ಯ**=ಅದರ] **ಪ್ರತಿಷ್ಠಾ**=ಆಶ್ರಯವು; **ಅಂತರಿಕ್ಷ**=ಅಂತರಿಕ್ಷವು **ಮರೀಚಯಃ**=ಮರೀಚಿಲೋಕಗಳು; **ಪೃಥಿವೀ**=ಪೃಥ್ವಿಯು **ಮರಃ**=ಮರಲೋಕವು; **ಯಾಃ**=ಯಾವುವು **ಅಧಸ್ತಾತ್**=ಕೆಳಗಿರುವುವೊ **ತಾಃ**=ಅವು **ಆಪಃ**=ಆಪೋಲೋಕವು.

೨. ಅವನು ಈ ಲೋಕಗಳನ್ನು ಸೃಷ್ಟಿಸಿದನು: ಅಂಭೋಲೋಕ,[೧] ಮರೀಚಿಲೋಕಗಳು,[೨] ಮರಲೋಕ,[೩] ಆಪೋಲೋಕ; ಆ ಅಂಭೋಲೋಕವು ದ್ಯುಲೋಕದ ಆಚೆಗಿರುವುದು; ದ್ಯುಲೋಕವು ಅದರ ಆಶ್ರಯವು; ಅಂತರಿಕ್ಷವು ಮರೀಚಿಲೋಕಗಳು; ಪೃಥ್ವಿಯು ಮರಲೋಕವು; ಪೃಥ್ವಿಯ ಕೆಳಗಿರುವುದು ಆಪೋಲೋಕ.

[[೧]ಸ್ವರ್ಲೋಕದಿಂದ ಮೇಲಿರುವ ಲೋಕಗಳಿಗೆಲ್ಲ ಅಂಭಸ್ಸು ಎಂದು ಹೆಸರು.

[೨]ಮರೀಚಿಲೋಕವು ಒಂದೇ ಆದರೂ ಅನೇಕ ಸ್ಥಾನಗಳಲ್ಲಿ ಇರುವುದರಿಂದ ಮೂಲದಲ್ಲಿ ಬಹುವಚನವನ್ನು ಪ್ರಯೋಗಿಸಿದೆ; ಅಥವಾ ಮರೀಚಿಗಳೊಂದಿಗೆ (ರಶ್ಮಿಗಳೊಂದಿಗೆ) ಸಂಬಂಧವಿರುವುದರಿಂದ 'ಮರೀಚಯಃ'.

[೩]ಇಲ್ಲಿ ಪ್ರಾಣಿಗಳು ಮೃತರಾಗುವುದರಿಂದ 'ಮರ' ಎಂದು ಹೇಳಿದೆ. ಲೋಕಗಳು ಪಂಚಭೂತಾತ್ಮಕಗಳಾದರೂ ನೀರಿನ ಬಾಹುಳ್ಯದಿಂದ ಅಂಭಸ್ಸು ಮರೀಚಿ ಮರ ಅಪ್ ಎಂಬ ನೀರಿನ ಹೆಸರುಗಳಿಂದಲೇ ಕರೆಯಲ್ಪಟ್ಟಿವೆ.]

**ಸ ಈಕ್ಷತೇಮೇ ನು ಲೋಕಾ ಲೋಕಪಾಲಾನ್ನು ಸೃಜಾ ಇತಿ। ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಮೂರ್ಛಯತ್ ॥ ೩ ॥**

ಸಃ=ಅವನು **ಈಕ್ಷತ**=ಯೋಚಿಸಿದನು—**ಇಮೇ ನು**=ಇವೇ **ಲೋಕಾಃ**=ಲೋಕಗಳು. **ಲೋಕಪಾಲಾನ್ ನು**=ಲೋಕಪಾಲರನ್ನು **ಸೃಜೈ**=ಸೃಷ್ಟಿಸುವೆನು **ಇತಿ**=ಎಂದು. **ಸಃ**=ಅವನು **ಅದ್ಭ್ಯಃ ಏವ**=ನೀರಿನಿಂದಲೇ **ಪುರುಷಂ**=ಪುರುಷಾಕಾರವನ್ನು **ಸಮುದ್ಧೃತ್ಯ**=ಮೇಲಕ್ಕೆತ್ತಿ **ಅಮೂರ್ಛಯತ್**=ನಿರ್ಮಿಸಿದನು.

೩. ಅವನು[೧] ಯೋಚಿಸಿದನು: 'ಇವೇ (ನಾನು ಸೃಷ್ಟಿಸಿದ) ಲೋಕಗಳು.[೨] (ಈಗ) ಲೋಕಪಾಲಕರನ್ನು ಸೃಷ್ಟಿಸುವೆನು.' ಅವನು ನೀರಿನಿಂದಲೇ[೩] ಪುರುಷಾಕಾರವನ್ನು[೪] ಮೇಲಕ್ಕೆತ್ತಿ ನಿರ್ಮಿಸಿದನು.

[[೧] ಈಶ್ವರನು.

[೨] ಸರ್ವಪ್ರಾಣಿಗಳಿಗೂ ಕರ್ಮಫಲವನ್ನು ಹೊಂದಲು ಆಶ್ರಯವಾಗಿರುವ ನಾಲ್ಕು ಲೋಕಗಳು.

[೩] ಅಪ್ ಪ್ರಧಾನವಾಗಿರುವ ಪಂಚಭೂತಗಳಿಂದ.

[೪] ವಿರಾಟ್ ಪುರುಷನನ್ನು.]

**ತಮಭ್ಯತಪತ್, ತಸ್ಯಾಭಿತಪ್ತಸ್ಯ ಮುಖಂ ನಿರಭಿದ್ಯತ ಯಥಾಂಡಮ್। ಮುಖಾದ್ವಾಗ್ವಾಚೋಽಗ್ನಿರ್ನಾಸಿಕೇ ನಿರಭಿದ್ಯೇತಾಂ, ನಾಸಿಕಾಭ್ಯಾಂ ಪ್ರಾಣಃ, ಪ್ರಾಣಾದ್ವಾಯುರಕ್ಷಿಣೀ ನಿರಭಿದ್ಯೇತಾಮ್, ಅಕ್ಷೀಭ್ಯಾಂ ಚಕ್ಷುಶ್ಚಕ್ಷುಷ ಆದಿತ್ಯಃ, ಕರ್ಣೌ ನಿರಭಿದ್ಯೇತಾಂ, ಕರ್ಣಾಭ್ಯಾಂ ಶ್ರೋತ್ರಂ, ಶ್ರೋತ್ರಾದ್ದಿಶಸ್ತ್ವಙ್ನಿರಭಿದ್ಯತ, ತ್ವಚೋ ಲೋಮಾನಿ, ಲೋಮಭ್ಯ ಓಷಧಿವನಸ್ಪತಯೋ, ಹೃದಯಂ ನಿರಭಿದ್ಯತ, ಹೃದಯಾನ್ಮನೋ, ಮನಸಶ್ಚಂದ್ರಮಾ, ನಾಭಿರ್ನಿರಭಿದ್ಯತ, ನಾಭ್ಯಾ ಅಪಾನೋಽಪಾನಾನ್ಮೃತ್ಯುಃ, ಶಿಶ್ನಂ ನಿರಭಿದ್ಯತ, ಶಿಶ್ನಾದ್ರೇತೋ ರೇತಸ ಆಪಃ ॥ ೪ ॥**

ಇತಿ ಐತರೇಯೋಪನಿಷದಿ ಪ್ರಥಮೋಽಧ್ಯಾಯೇ ಪ್ರಥಮಃ ಖಂಡಃ ॥

ತಂ=ಅವನನ್ನು ಕುರಿತು **ಅಭ್ಯತಪತ್**=ಧ್ಯಾನಮಾಡಿದನು. **ತಸ್ಯ ಅಭಿತಪ್ತಸ್ಯ**=ಧ್ಯಾನಿಸಲ್ಪಟ್ಟ ಅವನಿಗೆ **ಮುಖಂ**=ಬಾಯಿ **ನಿರಭಿದ್ಯತ**=ಉತ್ಪನ್ನವಾಯಿತು. **ಯಥಾ ಅಂಡಂ** = ಅಂಡದಂತೆ. **ಮುಖಾತ್** = ಬಾಯಿಯಿಂದ

**ವಾಕ್**=ವಾಕ್ಕು, **ವಾಚಃ**=ವಾಕ್ಕಿನಿಂದ **ಅಗ್ನಿಃ**=ಅಗ್ನಿ [ಉತ್ಪನ್ನವಾದುವು]. **ನಾಸಿಕೇ**=ಮೂಗಿನ ಸೊಳ್ಳೆಗಳು **ನಿರಭಿದ್ಯೇತಾಂ**=ಉತ್ಪನ್ನವಾದುವು. **ನಾಸಿಕಾಭ್ಯಾಂ**=ಮೂಗಿನ ಸೊಳ್ಳೆಗಳಿಂದ **ಪ್ರಾಣಃ**=ಘ್ರಾಣೇಂದ್ರಿಯವು, **ಪ್ರಾಣಾತ್**=ಘ್ರಾಣೇಂದ್ರಿಯದಿಂದ **ವಾಯುಃ**=ವಾಯುವು [ಉತ್ಪನ್ನವಾದುವು]. **ಅಕ್ಷಿಣೀ**=ಕಣ್ಣುಗಳು **ನಿರಭಿದ್ಯೇತಾಂ**=ಉತ್ಪನ್ನವಾದುವು. **ಅಕ್ಷೀಭ್ಯಾಂ** = ಕಣ್ಣುಗಳಿಂದ **ಚಕ್ಷುಃ**=ಚಕ್ಷುರಿಂದ್ರಿಯವು, **ಚಕ್ಷುಷಃ**=ಚಕ್ಷುರಿಂದ್ರಿಯದಿಂದ **ಆದಿತ್ಯಃ**=ಆದಿತ್ಯನು [ಉತ್ಪನ್ನರಾದರು]. **ಕರ್ಣೌ**=ಕಿವಿಗಳು **ನಿರಭಿದ್ಯೇತಾಂ**=ಉತ್ಪನ್ನವಾದುವು. **ಕರ್ಣಾಭ್ಯಾಂ** = ಕಿವಿಗಳಿಂದ **ಶ್ರೋತ್ರಂ** = ಶ್ರೋತ್ರೇಂದ್ರಿಯವು, **ಶ್ರೋತ್ರಾತ್**=ಶ್ರೋತ್ರೇಂದ್ರಿಯದಿಂದ **ದಿಶಃ**=ದಿಕ್ಕುಗಳು [ಉತ್ಪನ್ನವಾದುವು]. **ತ್ವಕ್**=ಚರ್ಮವು **ನಿರಭಿದ್ಯತ** = ಉತ್ಪನ್ನವಾಯಿತು. **ತ್ವಚಃ** = ಚರ್ಮದಿಂದ **ಲೋಮಾನಿ**=ಕೂದಲುಗಳು, **ಲೋಮಭ್ಯಃ**=ಕೂದಲುಗಳಿಂದ **ಓಷಧಿವನಸ್ಪತಯಃ**=ಓಷಧಿವನಸ್ಪತಿಗಳು [ಉತ್ಪನ್ನವಾದುವು]. **ಹೃದಯಂ**=ಹೃದಯವು **ನಿರಭಿದ್ಯತ** = ಉತ್ಪನ್ನವಾಯಿತು. **ಹೃದಯಾತ್** = ಹೃದಯದಿಂದ **ಮನಃ** = ಮನಸ್ಸು, **ಮನಸಃ** = ಮನಸ್ಸಿನಿಂದ **ಚಂದ್ರಮಾಃ** = ಚಂದ್ರನು [ಉತ್ಪನ್ನರಾದರು]. **ನಾಭಿಃ** = ನಾಭಿಯು **ನಿರಭಿದ್ಯತ** = ಉತ್ಪನ್ನವಾಯಿತು. **ನಾಭ್ಯಾಃ** = ನಾಭಿಯಿಂದ **ಅಪಾನಃ**=ಅಪಾನವು, **ಅಪಾನಾತ್**=ಅಪಾನದಿಂದ **ಮೃತ್ಯುಃ**=ಮೃತ್ಯುವು [ಉತ್ಪನ್ನವಾದುವು]. **ಶಿಶ್ನಂ**=ಶಿಶ್ನವು **ನಿರಭಿದ್ಯತ**=ಉತ್ಪನ್ನವಾಯಿತು. **ಶಿಶ್ನಾತ್**=ಶಿಶ್ನದಿಂದ **ರೇತಃ**=ರೇತಸ್ಸು, **ರೇತಸಃ**=ರೇತಸ್ಸಿನಿಂದ **ಆಪಃ**=ನೀರು [ಉತ್ಪನ್ನವಾದುವು].

**೪.** (ಈಶ್ವರನು) ಅವನನ್ನು[೧] ಕುರಿತು ಧ್ಯಾನಮಾಡಿದನು.[೨] (ಹೀಗೆ) ಧ್ಯಾನಿಸಲ್ಪಟ್ಟ ಅವನಿಗೆ ಅಂಡದಂತೆ[೩] ಬಾಯಿ ಉತ್ಪನ್ನವಾಯಿತು. ಬಾಯಿಯಿಂದ ವಾಗಿಂದ್ರಿಯ, ವಾಗಿಂದ್ರಿಯದಿಂದ ಅಗ್ನಿ[೪] (ಉತ್ಪನ್ನವಾದುವು). ಮೂಗಿನ ಸೊಳ್ಳೆಗಳು ಉತ್ಪನ್ನವಾದುವು. ಮೂಗಿನ ಸೊಳ್ಳೆಗಳಿಂದ ಘ್ರಾಣೇಂದ್ರಿಯವು, ಘ್ರಾಣೇಂದ್ರಿಯದಿಂದ (ಅದರ ದೇವತೆಯಾದ) ವಾಯುವು ಉತ್ಪನ್ನರಾದರು. ಕಣ್ಣುಗಳು ಉತ್ಪನ್ನವಾದುವು. ಕಣ್ಣುಗಳಿಂದ ಚಕ್ಷುರಿಂದ್ರಿಯ, ಚಕ್ಷುರಿಂದ್ರಿಯದಿಂದ (ಅದರ ದೇವತೆಯಾದ) ಆದಿತ್ಯನು (ಉತ್ಪನ್ನರಾದರು). ಕಿವಿಗಳು ಉತ್ಪನ್ನವಾದುವು. ಕಿವಿಗಳಿಂದ ಶ್ರೋತ್ರೇಂದ್ರಿಯವು, ಶ್ರೋತ್ರೇಂದ್ರಿಯದಿಂದ ದಿಗ್ದೇವತೆಗಳು (ಉತ್ಪನ್ನರಾದರು). ಚರ್ಮವು ಉತ್ಪನ್ನವಾಯಿತು. ಚರ್ಮದಿಂದ ಕೂದಲುಗಳು,[೫] ಕೂದಲುಗಳಿಂದ ಓಷಧಿವನಸ್ಪತಿಗಳು[೬] (ಉತ್ಪನ್ನವಾದುವು). ಹೃದಯವು ಉತ್ಪನ್ನವಾಯಿತು. ಹೃದಯದಿಂದ ಮನಸ್ಸು, ಮನಸ್ಸಿನಿಂದ ಚಂದ್ರನು (ಉತ್ಪನ್ನರಾದರು). ನಾಭಿಯು ಉತ್ಪನ್ನ

ವಾಯಿತು. ನಾಭಿಯಿಂದ ಅಪಾನವು,[7] ಅಪಾನದಿಂದ ಮೃತ್ಯುವು[8] (ಉತ್ಪನ್ನವಾದುವು). ಶಿಶ್ನವು ಉತ್ಪನ್ನವಾಯಿತು. ಶಿಶ್ನದಿಂದ ರೇತಸ್ಸು, ರೇತಸ್ಸಿನಿಂದ ನೀರು[9] (ಉತ್ಪನ್ನವಾದುವು).

[[1] ಪುರುಷಾಕಾರವಾದ ಪಿಂಡವನ್ನು ಕುರಿತು.

[2] ಸಂಕಲ್ಪಮಾಡಿದನು ಎಂದರ್ಥ. ‘ಯಾವನ ತಪಸ್ಸು ಜ್ಞಾನಮಯವಾಗಿರುವುದೋ **ಯಸ್ಯ ಜ್ಞಾನಮಯಂ ತಪಃ** ಎಂದು ಮುಂಡಕೋಪನಿಷತ್ (೧, ೧, ೯) ಹೇಳುತ್ತದೆ.

[3] ಪಕ್ಷಿಯ ಮೊಟ್ಟೆಯು ಒಡೆಯುವಂತೆ.

[4] ವಾಗಿಂದ್ರಿಯದ ಅಧಿಷ್ಠಾತೃವಾದ ಅಗ್ನಿ ಎಂಬ ಲೋಕಪಾಲಕನು.

[5] ಸ್ಪರ್ಶೇಂದ್ರಿಯ.

[6] ಅವುಗಳ ಅಧಿದೇವತೆಯಾದ ವಾಯು.

[7] ಪಾಯ್ವಿಂದ್ರಿಯವು.

[8] ಪಾಯ್ವಿಂದ್ರಿಯದ ಅಧಿಷ್ಠಾತೃದೇವತೆ.

[9] ನೀರಿನ ದ್ವಾರಾ ಉಪಲಕ್ಷಿತನಾದ ಮತ್ತು ಪಂಚಭೂತಗಳೇ ಉಪಾಧಿಗಳಾಗಿರುವ ಪ್ರಜಾಪತಿಯು.]

## ಎರಡನೆಯ ಖಂಡ

**ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ ಮಹತ್ಯರ್ಣವೇ ಪ್ರಾಪತನ್ । ತಮಶನಾಪಿಪಾಸಾಭ್ಯಾಮನ್ವವಾರ್ಜತ್ । ತಾ ಏನಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ ಪ್ರತಿಷ್ಠಿತಾ ಅನ್ನಮದಾಮೇತಿ ॥ ೧ ॥**

**ತಾಃ ಏತಾಃ**=ಆ ಈ **ಸೃಷ್ಟಾಃ**=ಸೃಷ್ಟಿಸಲ್ಪಟ್ಟ **ದೇವತಾಃ**=ದೇವತೆಗಳು **ಅಸ್ಮಿನ್**=ಈ **ಮಹತಿ ಅರ್ಣವೇ**=ಮಹಾಸಾಗರದಲ್ಲಿ **ಪ್ರಾಪತನ್**=ಬಿದ್ದರು. **ತಂ**=ಅವನನ್ನು **ಅಶನಾಪಿಪಾಸಾಭ್ಯಾಂ**=ಹಸಿವುಬಾಯಾರಿಕೆಗಳಿಂದ **ಅನ್ವವಾರ್ಜತ್**=ಕೂಡಿಸಿದನು. **ತಾಃ**=ಅವರು, ದೇವತೆಗಳು **ಏನಂ**=ಇವನನ್ನು ಕುರಿತು **ಅಬ್ರುವನ್**=ಹೇಳಿದರು— **ನಃ**=ನಮಗೆ **ಆಯತನಂ**=ಸ್ಥಾನವನ್ನು **ಪ್ರಜಾನೀಹಿ**=ಯೋಚಿಸು, **ಯಸ್ಮಿನ್**=ಯಾವುದರಲ್ಲಿ **ಪ್ರತಿಷ್ಠಿತಾಃ**=ಪ್ರತಿಷ್ಠಿತರಾಗಿ **ಅನ್ನಂ**=ಅನ್ನವನ್ನು **ಅದಾಮ**=ತಿನ್ನುವೆವೊ **ಇತಿ**=ಎಂದು.

೧. ಸೃಷ್ಟಿಸಲ್ಪಟ್ಟ ಆ ಈ ದೇವತೆಗಳು[೧] ಈ ಮಹಾಸಾಗರದಲ್ಲಿ[೨] ಬಿದ್ದರು, (ಈಶ್ವರನು) ಅವನನ್ನು[೩] ಹಸಿವುಬಾಯಾರಿಕೆಗಳಿಂದ ಕೂಡಿಸಿದನು. ದೇವತೆಗಳು ಇವನಿಗೆ[೪] ಹೇಳಿದರು: 'ಎಲ್ಲಿ ಪ್ರತಿಷ್ಠಿತರಾಗಿ ನಾವು ಅನ್ನವನ್ನು ತಿನ್ನಬಹುದೊ ಅಂತಹ ಸ್ಥಾನವನ್ನು ಆಲೋಚಿಸು.'

[[೧] ಲೋಕಪಾಲಕರಾಗಬೇಕೆಂದು ಈಶ್ವರನಿಂದ ಸೃಷ್ಟಿಸಲ್ಪಟ್ಟ ಅಗ್ನಿಯೇ ಮೊದಲಾದ ದೇವತೆಗಳು.

[೨] ಅವಿದ್ಯಾಕಾಮಕರ್ಮಗಳಿಂದ ಕೂಡಿರುವ ಸಂಸಾರಸಮುದ್ರದಲ್ಲಿ.

[೩] ಸ್ಥಾನಗಳು, ಕರಣಗಳು, ದೇವತೆಗಳು—ಇವುಗಳ ಉತ್ಪತ್ತಿಗೆ ಕಾರಣನಾದ ವಿರಾಟ್‌ಪುರುಷನನ್ನು. ಇವನು ಹಸಿವು ಮೊದಲಾದ ದೋಷಗಳುಳ್ಳವನಾದುದರಿಂದ, ಇವನ ಕಾರ್ಯವಾದ ದೇವತೆಗಳೂ ಕೂಡ ಹಸಿವು ಮೊದಲಾದುವುಗಳನ್ನು ಪಡೆದರು.

[೪] ವಿರಾಟ್‌ಪುರುಷನ ತಂದೆಯಾದ ಈಶ್ವರನಿಗೆ.]

**ತಾಭ್ಯೋ ಗಾಮಾನಯತ್; ತಾ ಅಬ್ರುವನ್ ನ ವೈ ನೋಽಯಮಲಮಿತಿ । ತಾಭ್ಯೋಽಶ್ವಮಾನಯತ್; ತಾ ಅಬ್ರುವನ್ ನ ವೈ ನೋಽಯಮಲಮಿತಿ ॥ ೨ ॥**

ತಾಭ್ಯಃ=ಅವರಿಗೆ ಗಾಂ = ಗೋವನ್ನು ಆನಯುತ್ = ತಂದುಕೊಟ್ಟನು. ತಾಃ = ಅವರು ಅಬ್ರುವನ್ = ಹೇಳಿದರು— ನಃ = ನಮಗೆ ಅಯಂ = ಇದು ನ ವೈ ಅಲಂ=ಸಾಲದು ಇತಿ=ಎಂದು. ತಾಭ್ಯಃ=ಅವರಿಗೆ ಅಶ್ವಂ=ಕುದುರೆಯನ್ನು ಆನಯುತ್=ತಂದುಕೊಟ್ಟನು. ತಾಃ=ಅವರು ಅಬ್ರುವನ್=ಹೇಳಿದರು— ನಃ=ನಮಗೆ ಅಯಂ=ಇದು ನ ವೈ ಅಲಂ=ಸಾಲದು ಇತಿ=ಎಂದು.

೨. (ಈಶ್ವರನು) ಅವರಿಗೆ ಗೋವನ್ನು[1] ತಂದುಕೊಟ್ಟನು. ಅವರು ಹೇಳಿದರು: 'ಇದು ನಮಗೆ ಸಾಲದು.' ಅವರಿಗೆ ಅಶ್ವವನ್ನು ತಂದುಕೊಟ್ಟನು. ಅವರು ಹೇಳಿದರು: 'ಇದು ನಮಗೆ ಸಾಲದು.'

[[1] ಗವಾಕೃತಿಯುಳ್ಳ ಪಿಂಡವನ್ನು ನೀರಿನಿಂದಲೇ ಮೇಲಕ್ಕೆತ್ತಿ ನಿರ್ಮಿಸಿದನು.]

**ತಾಭ್ಯಃ ಪುರುಷಮಾನಯುತ್; ತಾ ಅಬ್ರುವನ್ ಸುಕೃತಂ ಬತೇತಿ । ಪುರುಷೋ ವಾವ ಸುಕೃತಮ್ । ತಾ ಅಬ್ರವೀದ್ಯಥಾ-ಯತನಂ ಪ್ರವಿಶತೇತಿ ॥ ೩ ॥**

ತಾಭ್ಯಃ = ಅವರಿಗೆ ಪುರುಷಂ = ಪುರುಷನನ್ನು ಆನಯುತ್ = ತಂದುಕೊಟ್ಟನು. ತಾಃ = ಅವರು ಅಬ್ರುವನ್ = ಹೇಳಿದರು— ಸುಕೃತಂ ಬತ = ಸುಕೃತವು ಇತಿ=ಎಂದು. ಪುರುಷಃ ವಾವ=ಪುರುಷನೇ ಸುಕೃತಂ=ಸುಕೃತವು. [ಸಃ = ಅವನು] ತಾಃ = ಅವರಿಗೆ ಅಬ್ರವೀತ್ = ಹೇಳಿದನು— ಯಥಾಯ-ತನಂ=ಸ್ಥಾನಕ್ಕೆ ತಕ್ಕಂತೆ ಪ್ರವಿಶತ=ಪ್ರವೇಶಿಸಿರಿ ಇತಿ=ಎಂದು.

೩. (ಈಶ್ವರನು) ಅವರಿಗೆ ಪುರುಷನನ್ನು ತಂದುಕೊಟ್ಟನು.[1] ಅವರು ಹೇಳಿದರು; 'ಚೆನ್ನಾಗಿ ಆಯಿತು.'[2] ಪುರುಷನೇ ಸುಕೃತವು.[3] (ಅವನು) ಅವರಿಗೆ ಹೇಳಿದನು: 'ನಿಮ್ಮ ಸ್ಥಾನಕ್ಕೆ ತಕ್ಕಂತೆ ಪ್ರವೇಶಿಸಿರಿ.'[4]

[[1] ದೇವತೆಗಳು ಎಲ್ಲವನ್ನೂ ನಿರಾಕರಿಸಲು, ಪುರುಷನನ್ನು ತಂದುಕೊಟ್ಟನು.

[2] ಈ ಆಶ್ರಯುವು ಉತ್ತಮವಾಗಿ ನಿರ್ಮಿಸಲ್ಪಟ್ಟಿದೆ ಎಂದರ್ಥ.

[3] ಎಲ್ಲ ಪುಣ್ಯಕರ್ಮಗಳನ್ನು ಮಾಡುವುದಕ್ಕೆ ಮಾನವದೇಹವು ಕಾರಣವಾಗಿರುವುದರಿಂದ ಅದು ಸುಕೃತವೆನಿಸುತ್ತದೆ.

[4] ಈ ಅಧಿಷ್ಠಾನವು ಇವರಿಗೆ ಇಷ್ಟವಾಗಿದೆ ಎಂದು ತಿಳಿದುಕೊಂಡು ಈಶ್ವರನು ಹೇಳಿದನು.]

**ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶದಾದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿ-**

**ಶದ್ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ನೋಷಧಿವನಸ್ಪತಯೋ ಲೋಮಾನಿ ಭೂತ್ವಾ ತ್ವಚಂ ಪ್ರಾವಿಶಂಶ್ಚಂದ್ರಮಾ ಮನೋ ಭೂತ್ವಾ ಹೃದಯಂ ಪ್ರಾವಿಶನ್ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶದಾಪೋ ರೇತೋ ಭೂತ್ವಾ ಶಿಶ್ನಂ ಪ್ರಾವಿಶನ್ ॥ ೪ ॥**

**ಅಗ್ನಿಃ**=ಅಗ್ನಿಯು **ವಾಕ್ ಭೂತ್ವಾ**=ವಾಗಿಂದ್ರಿಯವಾಗಿ **ಮುಖಂ**=ಬಾಯಿಯನ್ನು **ಪ್ರಾವಿಶತ್**=ಪ್ರವೇಶಿಸಿದನು. **ವಾಯುಃ**=ವಾಯುವು **ಪ್ರಾಣಃ ಭೂತ್ವಾ**=ಘ್ರಾಣೇಂದ್ರಿಯವಾಗಿ **ನಾಸಿಕೇ**=ಮೂಗಿನ ಸೊಳ್ಳೆಗಳನ್ನು **ಪ್ರಾವಿಶತ್**=ಪ್ರವೇಶಿಸಿದನು. **ಆದಿತ್ಯಃ**=ಆದಿತ್ಯನು **ಚಕ್ಷುಃ ಭೂತ್ವಾ**=ಚಕ್ಷುರಿಂದ್ರಿಯವಾಗಿ **ಅಕ್ಷಿಣೀ**=ಕಣ್ಣುಗಳನ್ನು **ಪ್ರಾವಿಶತ್**=ಪ್ರವೇಶಿಸಿದನು. **ದಿಶಃ**=ದಿಗ್ದೇವತೆಗಳು **ಶ್ರೋತ್ರಂ ಭೂತ್ವಾ**=ಶ್ರೋತ್ರೇಂದ್ರಿಯವಾಗಿ **ಕರ್ಣೌ**=ಕಿವಿಗಳನ್ನು **ಪ್ರಾವಿಶನ್**=ಪ್ರವೇಶಿಸಿದರು. **ಓಷಧಿವನಸ್ಪತಯಃ**=ಓಷಧಿವನಸ್ಪತಿಗಳ ದೇವತೆಗಳು **ಲೋಮಾನಿ ಭೂತ್ವಾ**=ಕೂದಲುಗಳಿಂದ ಕೂಡಿದ ತ್ವಗಿಂದ್ರಿಯವಾಗಿ **ತ್ವಚಂ**=ಚರ್ಮವನ್ನು **ಪ್ರಾವಿಶನ್**=ಪ್ರವೇಶಿಸಿದರು. **ಚಂದ್ರಮಾಃ**=ಚಂದ್ರನು **ಮನಃ ಭೂತ್ವಾ**=ಮನಸ್ಸಾಗಿ **ಹೃದಯಂ**=ಹೃದಯವನ್ನು **ಪ್ರಾವಿಶತ್**=ಪ್ರವೇಶಿಸಿದನು. **ಮೃತ್ಯುಃ**=ಮೃತ್ಯುವು **ಅಪಾನಃ ಭೂತ್ವಾ**=ಅಪಾನವಾಗಿ **ನಾಭಿಂ**=ನಾಭಿಯನ್ನು **ಪ್ರಾವಿಶತ್**=ಪ್ರವೇಶಿಸಿದನು. **ಆಪಃ**=ಜಲದೇವತೆಗಳು **ರೇತಃ ಭೂತ್ವಾ**=ರೇತಸ್ಸಾಗಿ **ಶಿಶ್ನಂ**=ಶಿಶ್ನವನ್ನು **ಪ್ರಾವಿಶನ್**=ಪ್ರವೇಶಿಸಿದರು.

**೪.** ಅಗ್ನಿಯು[೧] ವಾಗಿಂದ್ರಿಯವಾಗಿ ಬಾಯಿಯನ್ನು ಪ್ರವೇಶಿಸಿದನು. ವಾಯುವು ಘ್ರಾಣೇಂದ್ರಿಯವಾಗಿ ಮೂಗಿನ ಸೊಳ್ಳೆಗಳನ್ನು ಪ್ರವೇಶಿಸಿದನು. ಆದಿತ್ಯನು ಚಕ್ಷುರಿಂದ್ರಿಯವಾಗಿ ಕಣ್ಣುಗಳನ್ನು ಪ್ರವೇಶಿಸಿದನು. ದಿಗ್ದೇವತೆಗಳು ಶ್ರೋತ್ರೇಂದ್ರಿಯವಾಗಿ ಕಿವಿಗಳನ್ನು ಪ್ರವೇಶಿಸಿದರು. ಓಷಧಿವನಸ್ಪತಿಗಳ ದೇವತೆಗಳು ಕೂದಲುಗಳಿಂದ ಕೂಡಿದ ತ್ವಗಿಂದ್ರಿಯವಾಗಿ ಚರ್ಮವನ್ನು ಪ್ರವೇಶಿಸಿದರು. ಚಂದ್ರನು ಮನಸ್ಸಾಗಿ ಹೃದಯವನ್ನು ಪ್ರವೇಶಿಸಿದನು. ಮೃತ್ಯುವು ಅಪಾನವಾಗಿ ನಾಭಿಯನ್ನು ಪ್ರವೇಶಿಸಿದನು. ಜಲದೇವತೆಗಳು ರೇತಸ್ಸಾಗಿ ಶಿಶ್ನವನ್ನು ಪ್ರವೇಶಿಸಿದರು.

[[೧] ವಾಗಭಿಮಾನಿನಿಯಾದ ದೇವತೆಯು.]

**ತಮಶನಾಯಾಪಿಪಾಸೇ ಅಬ್ರೂತಾಮ್ — ಆವಾಭ್ಯಾಮಭಿಪ್ರಜಾನೀಹೀತಿ । ತೇ ಅಬ್ರವೀದೇತಾಸ್ವೇವ ವಾಂ ದೇವತಾಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ । ತಸ್ಮಾದ್ಯಸ್ಯೈ ಕಸ್ಯೈ ಚ**

**ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾಮಶನಾಯಾ-ಪಿಪಾಸೇ ಭವತಃ ॥ ೫ ॥**

**ಇತಿ ಐತರೇಯೋಪನಿಷದಿ ಪ್ರಥಮೋಽಧ್ಯಾಯೇ ದ್ವಿತೀಯಃ ಖಂಡಃ ॥**

**ಅಶನಾಯಾಪಿಪಾಸೇ**=ಹಸಿವುಬಾಯಾರಿಕೆಗಳು **ತಂ**=ಆವನನ್ನು, ಈಶ್ವರನನ್ನು ಕುರಿತು **ಅಬ್ರೂತಾಂ**=ಹೇಳಿದುವು— **ಆವಾಭ್ಯಾಂ**=ನಮಗೆ [**ಅಧಿಷ್ಠಾನಂ**=ಆಶ್ರಯವನ್ನು] **ಅಭಿಪ್ರಜಾನೀಹಿ**=ಆಲೋಚಿಸು ಎಂದರೆ ಕೊಡು **ಇತಿ**=ಎಂದು. [**ಈಶ್ವರಃ**=ಈಶ್ವರನು] **ತೇ**=ಅವುಗಳನ್ನು ಕುರಿತು **ಅಬ್ರವೀತ್**=ಹೇಳಿದನು— **ಏತಾಸು ದೇವತಾಸು ಏವ**=ಈ ದೇವತೆಗಳಲ್ಲಿಯೇ **ವಾಂ**=ನಿಮ್ಮನ್ನು **ಆಭಜಾಮಿ**=ಸೇರಿಸುತ್ತೇನೆ; **ಏತಾಸು**=ಇವರಲ್ಲಿ **ಭಾಗಿನ್ಯೌ ಕರೋಮಿ**=ಭಾಗಿಗಳಾಗಿ ಮಾಡುತ್ತೇನೆ **ಇತಿ**=ಎಂದು. **ತಸ್ಮಾತ್**=ಆದುದರಿಂದ **ಯಸ್ಯೈ ಕಸ್ಯೈ ಚ ದೇವತಾಯೈ**=ಯಾವ ದೇವತೆಗೆ **ಹವಿಃ**=ಹವಿಸ್ಸನ್ನು **ಗೃಹ್ಯತೇ**=[ಕೊಡಲು] ತೆಗೆದುಕೊಂಡರೂ **ಅಸ್ಯಾಂ**=ಆ ದೇವತೆಯಲ್ಲಿ **ಅಶನಾಯಾಪಿಪಾಸೇ**=ಹಸಿವುಬಾಯಾರಿಕೆಗಳು **ಭಾಗಿನ್ಯೌ ಏವ ಭವತಃ**=ಭಾಗಿಗಳಾಗಿಯೇ ಇರುತ್ತವೆ.

**೫.** ಹಸಿವುಬಾಯಾರಿಕೆಗಳು ಈಶ್ವರನನ್ನು ಕುರಿತು ಹೇಳಿದುವು: 'ನಮಗೆ ಒಂದು (ಆಶ್ರಯವನ್ನು) ಕೊಡು.' (ಈಶ್ವರನು) ಅವುಗಳನ್ನು ಕುರಿತು ಹೇಳಿದನು: 'ಈ ದೇವತೆಗಳಲ್ಲಿಯೇ ನಿಮ್ಮನ್ನು ಸೇರಿಸುತ್ತೇನೆ; ಇವರಲ್ಲಿ ಭಾಗಿಗಳಾಗಿ ಮಾಡುತ್ತೇನೆ.' ಆದುದರಿಂದ ಯಾವ ದೇವತೆಗೆ ಹವಿಸ್ಸನ್ನು (ಕೊಡಲು) ತೆಗೆದುಕೊಂಡರೂ, ಆ ದೇವತೆಯಲ್ಲಿ ಹಸಿವು ಬಾಯಾರಿಕೆಗಳು ಭಾಗಿಗಳಾಗಿಯೇ ಇರುತ್ತವೆ.

[ಹಸಿವುಬಾಯಾರಿಕೆಗಳು ಧರ್ಮಸ್ವರೂಪಗಳಾಗಿರುವುದರಿಂದ ಧರ್ಮಿಯನ್ನು ಆಶ್ರಯಿಸದೆ ಸ್ವತಂತ್ರವಾಗಿ ಅನ್ನಪಾನಾದಿಗಳನ್ನು ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಆದುದರಿಂದ ಈಶ್ವರನು ಅಧ್ಯಾತ್ಮಾದಿದೇವತೆಗಳಾದ ಅಗ್ನ್ಯಾದಿಗಳಲ್ಲಿ ಇವುಗಳನ್ನು ಸೇರಿಸಿದನು.]

## ಮೂರನೆಯ ಖಂಡ

**ಸ ಈಕ್ಷತೇಮೇ ನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ॥ ೧ ॥**

ಸಃ=ಅವನು, ಈಶ್ವರನು **ಈಕ್ಷತ**=ಆಲೋಚಿಸಿದನು— **ಇಮೇ ನು**=ಇವೇ **ಲೋಕಾಃ ಚ**=ಲೋಕಗಳು, **ಲೋಕಪಾಲಾಃ ಚ**=ಲೋಕಪಾಲಕರು. ಏಭ್ಯಃ=ಇವರಿಗೆ **ಅನ್ನಂ**=ಅನ್ನವನ್ನು **ಸೃಜೈ**=ಸೃಷ್ಟಿಸುವೆನು **ಇತಿ**=ಎಂದು.

**೧.** ಈಶ್ವರನು ಆಲೋಚಿಸಿದನು: 'ಇವೇ ಲೋಕಗಳು ಮತ್ತು ಲೋಕಪಾಲಕರು. ಇವರಿಗೆ ಅನ್ನವನ್ನು ಸೃಷ್ಟಿಸುವೆನು.'

[ಇವರನ್ನು ಹಸಿವುಬಾಯಾರಿಕೆಗಳಿಂದ ಸೇರಿಸಿರುತ್ತೇನೆ. ಆದುದರಿಂದ ಅನ್ನವಿಲ್ಲದೆ ಇವರು ಬದುಕಲಾರರು. ಈ ಲೋಕಪಾಲಕರಿಗೆ ಅನ್ನವನ್ನು ಸೃಷ್ಟಿಸುತ್ತೇನೆ.]

**ಸೋಽಪೋಽಭ್ಯತಪತ್; ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ। ಯಾ ವೈ ಸಾ ಮೂರ್ತಿರಜಾಯತಾನ್ನಂ ವೈ ತತ್ ॥ ೨ ॥**

ಸಃ=ಆವನು, ಈಶ್ವರನು **ಅಪಃ** = ನೀರನ್ನು ಎಂದರೆ ಪಂಚಭೂತಗಳನ್ನು ಕುರಿತು **ಅಭ್ಯತಪತ್**=ಧ್ಯಾನಮಾಡಿದನು. **ಅಭಿತಪ್ತಾಭ್ಯಃ ತಾಭ್ಯಃ**=ಧ್ಯಾನಿಸಲ್ಪಟ್ಟ ಅವುಗಳಿಂದ **ಮೂರ್ತಿಃ**=ಮೂರ್ತಿಯು **ಅಜಾಯತ**=ಉತ್ಪನ್ನವಾಯಿತು. **ಯಾ ವೈ ಸಾ**=ಯಾವ ಆ **ಮೂರ್ತಿಃ**=ಮೂರ್ತಿಯು **ಅಜಾಯತ**=ಉತ್ಪನ್ನವಾಯಿತೊ **ತತ್ ವೈ ಅನ್ನಂ**=ಅದೇ ಅನ್ನವು.

**೨.** ಈಶ್ವರನು ಪಂಚಭೂತಗಳನ್ನು ಕುರಿತು ಧ್ಯಾನಿಸಿದನು. (ಹಾಗೆ) ಧ್ಯಾನಿಸಲ್ಪಟ್ಟ ಅವುಗಳಿಂದ ಒಂದು ಮೂರ್ತಿಯು[೧] ಉತ್ಪನ್ನವಾಯಿತು. ಯಾವ ಆ ಮೂರ್ತಿಯು ಉತ್ಪನ್ನವಾಯಿತೊ ಅದೇ ಅನ್ನವು.

[[೧] ವ್ರೀಹ್ಯಾದಿ ಧಾನ್ಯಗಳು ಮತ್ತು ಇತರ ಪ್ರಾಣಿಗಳು.]

**ತದೇತದಭಿಸೃಷ್ಟಂ ಪರಾಙತ್ಯಜಿಘಾಂಸತ್ । ತದ್ವಾಚಾಽಜಿಘೃಕ್ಷತ್, ತನ್ನಾಶಕ್ನೋದ್ವಾಚಾ ಗ್ರಹೀತುಮ್ । ಸ ಯದ್ಧೈನದ್ವಾಚಾಽಗ್ರಹೈಷ್ಯದಭಿವ್ಯಾಹೃತ್ಯ ಹೈವಾನ್ನಮತ್ರಪ್ಸ್ಯತ್ ॥ ೩ ॥**

**ಅಭಿಸೃಷ್ಟಂ**=ಸೃಷ್ಟಿಸಲ್ಪಟ್ಟ **ತತ್ ಏತತ್** [ಅನ್ನಂ]=ಆ ಈ [ಅನ್ನವು] **ಪರಾಕ್**=ಹಿಂತಿರುಗಿ **ಅತ್ಯಜಿಘಾಂಸತ್**=ಓಡಲು ಬಯಸಿತು. **ತತ್**=ಅದನ್ನು.

ಆ ಅನ್ನವನ್ನು ವಾಚಾ = ವಾಕ್ಕಿನಿಂದ ಅಜಿಘೃಕ್ಷತ್ = ಹಿಡಿಯಲೆತ್ನಿಸಿದನು. ತತ್=ಅದನ್ನು ವಾಚಾ=ವಾಕ್ಕಿನಿಂದ ಗ್ರಹೀತುಂ=ಹಿಡಿದುಕೊಳ್ಳಲು ನ ಅಶಕ್ನೋತ್=ಶಕ್ತನಾಗಲಿಲ್ಲ. ಸಃ=ಅವನು ಏನತ್=ಇದನ್ನು ವಾಚಾ=ವಾಕ್ಕಿನಿಂದ ಯತ್ ಅಗ್ರಹೈಷ್ಯತ್=ಹಿಡಿದುಕೊಂಡಿದ್ದರೆ ಅನ್ನಂ ಅಭಿವ್ಯಾಹೃತ್ಯ ಹ ಏವ=ಅನ್ನವನ್ನು ಉಚ್ಚರಿಸಿಯೇ ಅತ್ರಪ್ಸ್ಯತ್=ತೃಪ್ತನಾಗಬಹುದಾಗಿತ್ತು.

೩. ಸೃಷ್ಟಿಸಲ್ಪಟ್ಟ ಆ ಈ (ಅನ್ನವು) ಹಿಂತಿರುಗಿ ಓಡಲು ಬಯಸಿತು. (ವಿರಾಟ್ಪುರುಷನು)[೧] ಅದನ್ನು ವಾಕ್ಕಿನಿಂದ ಹಿಡಿಯಲೆತ್ನಿಸಿದನು. ಅದನ್ನು ವಾಕ್ಕಿನಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ವಾಕ್ಕಿನಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಉಚ್ಚರಿಸಿಯೇ ತೃಪ್ತನಾಗಬಹುದಾಗಿತ್ತು.

[[೧] ಲೋಕಪಾಲಕರ ಸಂಘಾತವೂ, ದೇಹೇಂದ್ರಿಯಗಳ ಸ್ವರೂಪವೂ, ಮೊದಲು ಹುಟ್ಟಿದ ಶರೀರಿಯೂ.]

**ತತ್ ಪ್ರಾಣೇನಾಜಿಘೃಕ್ಷತ್, ತನ್ನಾಶಕ್ನೋತ್ ಪ್ರಾಣೇನ ಗ್ರಹೀತುಮ್ । ಸ ಯದ್ಧೈನತ್ ಪ್ರಾಣೇನಾಗ್ರಹೈಷ್ಯದಭಿಪ್ರಾಣ್ಯ ಹೈವಾನ್ನಮನ್ನಮತ್ರಪ್ಸ್ಯತ್ ॥ ೪ ॥**

ತತ್ ಪ್ರಾಣೇನ=ಘ್ರಾಣೇಂದ್ರಿಯದ್ವಾರಾ ಅಜಿಘೃಕ್ಷತ್. ತತ್ ಪ್ರಾಣೇನ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ಪ್ರಾಣೇನ ಯತ್ ಅಗ್ರಹೈಷ್ಯತ್ ಅನ್ನಂ ಅಭಿಪ್ರಾಣ್ಯ ಹ ಏವ=ಘ್ರಾಣಿಸಿಯೇ ಅತ್ರಪ್ಸ್ಯತ್.

೪. (ವಿರಾಟ್ಪುರುಷನು) ಅದನ್ನು ಘ್ರಾಣೇಂದ್ರಿಯದಿಂದ ಹಿಡಿಯಲೆತ್ನಿಸಿದನು. ಅದನ್ನು ಘ್ರಾಣೇಂದ್ರಿಯದಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ಘ್ರಾಣೇಂದ್ರಿಯದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಘ್ರಾಣಿಸಿಯೇ ತೃಪ್ತನಾಗಬಹುದಾಗಿತ್ತು.

**ತಚ್ಚಕ್ಷುಷಾಽಜಿಘೃಕ್ಷತ್, ತನ್ನಾಶಕ್ನೋಚ್ಚಕ್ಷುಷಾ ಗ್ರಹೀತುಮ್ । ಸ ಯದ್ಧೈನಚ್ಚಕ್ಷುಷಾಽಗ್ರಹೈಷ್ಯದ್ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥ ೫ ॥**

ತತ್ ಚಕ್ಷುಷಾ=ಕಣ್ಣಿನಿಂದ, ದೃಷ್ಟಿಯಿಂದ ಅಜಿಘೃಕ್ಷತ್. ತತ್ ಚಕ್ಷುಷಾ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ಚಕ್ಷುಷಾ ಯತ್ ಅಗ್ರಹೈಷ್ಯತ್ ಅನ್ನಂ ದೃಷ್ಟ್ವಾ ಹ ಏವ=ನೋಡಿಯೇ ಅತ್ರಪ್ಸ್ಯತ್.

೫. (ವಿರಾಟ್ಪುರುಷನು) ಅದನ್ನು ದೃಷ್ಟಿಯಿಂದ ಹಿಡಿಯಲೆತ್ನಿಸಿದನು. ಅದನ್ನು ದೃಷ್ಟಿಯಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು

ಇದನ್ನು ದೃಷ್ಟಿಯಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ನೋಡಿಯೇ ತೃಪ್ತನಾಗಬಹುದಾಗಿತ್ತು.

**ತಚ್ಛ್ರೋತ್ರೇಣಾಜಿಘೃಕ್ಷತ್, ತನ್ನಾಶಕ್ನೋಚ್ಛ್ರೋತ್ರೇಣ ಗ್ರಹೀತುಮ್ । ಸ ಯದ್ಧೈನಚ್ಛ್ರೋತ್ರೇಣಾಗ್ರಹೈಷ್ಯಚ್ಛ್ರುತ್ವಾ ಹೈವಾನ್ನಮತ್ರಪ್ಸ್ಯತ್ ॥ ೬ ॥**

ತತ್ ಶ್ರೋತ್ರೇಣ=ಶ್ರವಣೇಂದ್ರಿಯದಿಂದ ಅಜಿಘೃಕ್ಷತ್. ತತ್ ಶ್ರೋತ್ರೇಣ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ಶ್ರೋತ್ರೇಣ ಯತ್ ಅಗ್ರಹೈಷ್ಯತ್ ಅನ್ನಂ ಶ್ರುತ್ವಾ ಹ ಏವ=ಕೇಳಿಯೇ ಅತ್ರಪ್ಸ್ಯತ್.

೬. (ವಿರಾಟ್‌ಪುರುಷನು) ಅದನ್ನು ಶ್ರವಣೇಂದ್ರಿಯದಿಂದ ಹಿಡಿಯಲೆತ್ನಿಸಿದನು. ಅದನ್ನು ಶ್ರವಣೇಂದ್ರಿಯದಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ಶ್ರವಣೇಂದ್ರಿಯದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಕೇಳಿಯೇ ತೃಪ್ತನಾಗಬಹುದಾಗಿತ್ತು.

**ತತ್ ತ್ವಚಾಽಜಿಘೃಕ್ಷತ್, ತನ್ನಾಶಕ್ನೋತ್ ತ್ವಚಾ ಗ್ರಹೀತುಮ್ । ಸ ಯದ್ಧೈನತ್ ತ್ವಚಾಽಗ್ರಹೈಷ್ಯತ್ ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥ ೭ ॥**

ತತ್ ತ್ವಚಾ=ಸ್ಪರ್ಶೇಂದ್ರಿಯದಿಂದ ಅಜಿಘೃಕ್ಷತ್. ತತ್ ತ್ವಚಾ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ತ್ವಚಾ ಯತ್ ಅಗ್ರಹೈಷ್ಯತ್ ಅನ್ನಂ ಸ್ಪೃಷ್ಟ್ವಾ ಹ ಏವ=ಸ್ಪರ್ಶಿಸಿಯೇ ಅತ್ರಪ್ಸ್ಯತ್.

೭. (ವಿರಾಟ್‌ಪುರುಷನು) ಅದನ್ನು ಸ್ಪರ್ಶೇಂದ್ರಿಯದಿಂದ ಹಿಡಿಯಲೆತ್ನಿಸಿದನು. ಅದನ್ನು ಸ್ಪರ್ಶೇಂದ್ರಿಯದಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ಸ್ಪರ್ಶೇಂದ್ರಿಯದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಸ್ಪರ್ಶಿಸಿಯೇ ತೃಪ್ತನಾಗಬಹುದಾಗಿತ್ತು.

**ತನ್ಮನಸಾಽಜಿಘೃಕ್ಷತ್, ತನ್ನಾಶಕ್ನೋನ್ಮನಸಾ ಗ್ರಹೀತುಮ್ । ಸ ಯದ್ಧೈನನ್ಮನಸಾಽಗ್ರಹೈಷ್ಯದ್ಧ್ಯಾತ್ವಾ ಹೈವಾನ್ನಮತ್ರಪ್ಸ್ಯತ್ ॥ ೮ ॥**

ತತ್ ಮನಸಾ=ಮನಸ್ಸಿನಿಂದ ಅಜಿಘೃಕ್ಷತ್. ತತ್ ಮನಸಾ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ಮನಸಾ ಯತ್ ಅಗ್ರಹೈಷ್ಯತ್ ಅನ್ನಂ ಧ್ಯಾತ್ವಾ ಹ ಏವ=ಯೋಚಿಸಿಯೇ ಅತ್ರಪ್ಸ್ಯತ್.

೮. (ವಿರಾಟ್‌ಪುರುಷನು) ಅದನ್ನು ಮನಸ್ಸಿನಿಂದ ಹಿಡಿಯಲೆತ್ನಿಸಿದನು. ಅದನ್ನು ಮನಸ್ಸಿನಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ಮನಸ್ಸಿನಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಯೋಚಿಸಿಯೇ ತೃಪ್ತನಾಗಬಹುದಾಗಿತ್ತು.

**ತಚ್ಛಿಶ್ನೇನಾಜಿಘೃಕ್ಷತ್, ತನ್ನಾಶಕ್ನೋಚ್ಛಿಶ್ನೇನ ಗ್ರಹೀತುಮ್ ।**
**ಸ ಯದ್ಧೈನಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯ ಹೈವಾನ್ನಮತ್ರಪ್ಸ್ಯತ್ ॥ ೯ ॥**

ತತ್ ಶಿಶ್ನೇನ=ಶಿಶ್ನದಿಂದ ಅಜಿಘೃಕ್ಷತ್. ತತ್ ಶಿಶ್ನೇನ ಗ್ರಹೀತುಂ ನ ಅಶಕ್ನೋತ್. ಸಃ ಏನತ್ ಶಿಶ್ನೇನ ಯತ್ ಅಗ್ರಹೈಷ್ಯತ್ ಅನ್ನಂ ವಿಸೃಜ್ಯ ಹ ಏವ=ವಿಸರ್ಜನದಿಂದಲೇ ಅತ್ರಪ್ಸ್ಯತ್.

೯. (ವಿರಾಟ್‌ಪುರುಷನು) ಅದನ್ನು ಶಿಶ್ನದಿಂದ ಹಿಡಿಯಲೆತ್ನಿಸಿದನು. ಅದನ್ನು ಶಿಶ್ನದಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಇದನ್ನು ಶಿಶ್ನದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ವಿಸರ್ಜಿಸುವುದರಿಂದಲೂ ತೃಪ್ತನಾಗಬಹುದಾಗಿತ್ತು.

**ತದಪಾನೇನಾಜಿಘೃಕ್ಷತ್, ತದಾವಯತ್ । ಸೈಷೋಽನ್ನಸ್ಯ ಗ್ರಹೋ ಯದ್ವಾಯುರನ್ನಾಯುರ್ವಾ ಏಷ ಯದ್ವಾಯುಃ ॥ ೧೦ ॥**

ತತ್=ಅದನ್ನು ಅಪಾನೇನ=ಅಪಾನದಿಂದ ಅಜಿಘೃಕ್ಷತ್=ಹಿಡಿಯಲೆತ್ನಿಸಿದನು; ತತ್=ಅದನ್ನು ಆವಯತ್=ಹಿಡಿದುಕೊಂಡನು. ಸಃ ಏಷಃ= ಆ ಈ ಯದ್ವಾಯುಃ=ವಾಯುವೆಂಬುದು ಅನ್ನಸ್ಯ=ಅನ್ನದ ಗ್ರಹಃ= ಗ್ರಾಹಕವು. ಏಷಃ ಯದ್ವಾಯುಃ=ಈ ವಾಯುವೆಂಬುದು ಅನ್ನಾಯುಃ ವೈ=ಅನ್ನದಿಂದಲೇ ಬದುಕಿರತಕ್ಕದ್ದು.

೧೦. (ವಿರಾಟ್‌ಪುರುಷನು) ಅದನ್ನು ಅಪಾನವಾಯುವಿನ ಮೂಲಕ ಹಿಡಿಯಲೆತ್ನಿಸಿದನು; ಅದನ್ನು ಹಿಡಿದುಕೊಂಡನು.[1] ಆ ಈ ವಾಯುವೆಂಬುದು ಅನ್ನದ ಗ್ರಾಹಕವು. ಈ ವಾಯುವೆಂಬುದು ಅನ್ನದಿಂದಲೇ ಬದುಕಿರತಕ್ಕದ್ದು.

[ಪ್ರಾಣದ ಅಪಾನವೃತ್ತಿಯಿಂದಲೇ ಆಹಾರವನ್ನು ತೆಗೆದುಕೊಂಡು ತಿಂದು ಜೀರ್ಣಮಾಡಿಕೊಳ್ಳಲು ಸಾಧ್ಯವಾಗುವುದು. ಆದುದರಿಂದ ಅಪಾನವೃತ್ತಿಯು ಅನ್ನಾಯುವೂ ಗ್ರಾಹಕವೂ ಎನಿಸಿದೆ.

[1] ತಿಂದನು.]

**ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ । ಸ ಈಕ್ಷತ ಕತರೇಣ ಪ್ರಪದ್ಯಾ ಇತಿ । ಸ ಈಕ್ಷತ ಯದಿ ವಾಚಾಽಭಿವ್ಯಾಹೃತಂ, ಯದಿ ಪ್ರಾಣೇನಾಭಿಪ್ರಾಣಿತಂ, ಯದಿ ಚಕ್ಷುಷಾ ದೃಷ್ಟಂ, ಯದಿ ಶ್ರೋತ್ರೇಣ ಶ್ರುತಂ, ಯದಿ ತ್ವಚಾ ಸ್ಪೃಷ್ಟಂ, ಯದಿ ಮನಸಾ ಧ್ಯಾತಂ, ಯದ್ಯಪಾನೇನಾಭ್ಯಪಾನಿತಂ, ಯದಿ ಶಿಶ್ನೇನ ವಿಸೃಷ್ಟ-ಮಥ ಕೋಽಹಮಿತಿ ॥ ೧೧ ॥**

**ಸಃ** = ಅವನು, ಈಶ್ವರನು **ಈಕ್ಷತ** = ಆಲೋಚಿಸಿದನು— **ಇದಂ** = ಇದು **ಮದೃತೇ** = ನಾನಿಲ್ಲದೆ **ಕಥಂ ನು ಸ್ಯಾತ್** = ಹೇಗೆ ತಾನೆ ಉಳಿದೀತು? **ಇತಿ** = ಎಂದು. **ಸಃ ಈಕ್ಷತ** = ಅವನು ಆಲೋಚಿಸಿದನು— **ಕತರೇಣ** = ಯಾವುದರಿಂದ **ಪ್ರಪದ್ಯೈ** = ಪಡೆದುಕೊಳ್ಳಲಿ, ಸೇರಲಿ? **ಸಃ ಈಕ್ಷತ** = ಅವನು ಆಲೋಚಿಸಿದನು— **ವಾಚಾ ಯದಿ ಅಭಿವ್ಯಾಹೃತಂ** = ವಾಕ್ಕಿನಿಂದ ಮಾತನಾಡಲ್ಪಟ್ಟರೆ, **ಪ್ರಾಣೇನ ಯದಿ ಅಭಿಪ್ರಾಣಿತಂ** = ಪ್ರಾಣದಿಂದ ಆಘ್ರಾಣಿಸಲ್ಪಟ್ಟರೆ, **ಚಕ್ಷುಷಾ ಯದಿ ದೃಷ್ಟಂ** = ಕಣ್ಣಿನಿಂದ ನೋಡಲ್ಪಟ್ಟರೆ, **ಶ್ರೋತ್ರೇಣ ಯದಿ ಶ್ರುತಂ** = ಶ್ರೋತ್ರದಿಂದ ಕೇಳಲ್ಪಟ್ಟರೆ, **ತ್ವಚಾ ಯದಿ ಸ್ಪೃಷ್ಟಂ** = ಚರ್ಮದಿಂದ ಸ್ಪರ್ಶಿಸಲ್ಪಟ್ಟರೆ, **ಮನಸಾ ಯದಿ ಧ್ಯಾತಂ** = ಮನಸ್ಸಿನಿಂದ ಚಿಂತಿಸಲ್ಪಟ್ಟರೆ, **ಅಪಾನೇನ ಯದಿ ಅಭ್ಯಪಾನಿತಂ** = ಅಪಾನದಿಂದ ಜೀರ್ಣಮಾಡಲ್ಪಟ್ಟರೆ, **ಶಿಶ್ನೇನ ಯದಿ ವಿಸೃಷ್ಟಂ** = ಶಿಶ್ನದಿಂದ ವಿಸರ್ಜಿಸಲ್ಪಟ್ಟರೆ **ಅಥ** = ಆಗ **ಕಃ ಅಹಂ** = ನಾನು ಯಾರು? **ಇತಿ** = ಎಂದು.

**೧೧.** ಈಶ್ವರನು ಆಲೋಚಿಸಿದನು: 'ಇದು[೧] ನಾನಿಲ್ಲದೆ ಹೇಗೆ ತಾನೆ ಉಳಿದೀತು?'[೨] ಅವನು ಆಲೋಚಿಸಿದನು: 'ನಾನು ಯಾವುದರಿಂದ[೩] ಇದನ್ನು ಪ್ರವೇಶಿಸಲಿ?' (ಮತ್ತೆ) ಅವನು ಆಲೋಚಿಸಿದನು: 'ವಾಕ್ಕು ಮಾತನಾಡಿದರೆ, ಪ್ರಾಣವು ಘ್ರಾಣಿಸಿದರೆ, ಚಕ್ಷುವು ನೋಡಿದರೆ, ಶ್ರೋತ್ರವು ಕೇಳಿದರೆ, ಚರ್ಮವು ಸ್ಪರ್ಶಿಸಿದರೆ, ಮನಸ್ಸು ಚಿಂತಿಸಿದರೆ, ಅಪಾನವು ಜೀರ್ಣ ಮಾಡಿದರೆ, ಶಿಶ್ನವು ವಿಸರ್ಜಿಸಿದರೆ ಆಗ ನಾನು ಯಾರು?'[೪]

[[೧] ದೇಹೇಂದ್ರಿಯಸಂಘಾತ.

[೨] 'ಈ ದೇಹೇಂದ್ರಿಯಸಂಘಾತವು ಪರಾರ್ಥವಾಗಿರುವುದರಿಂದ ಅದರ ಸ್ವಾಮಿಯಾದ ನನ್ನನ್ನು ಬಿಟ್ಟು ಹೇಗೆ ಉಳಿದೀತು? ಪುರದ ಸ್ವಾಮಿಯಿಲ್ಲದಿದ್ದರೆ ಪೌರಜನರ ಸ್ತುತ್ಯಾದಿಕರ್ಮಗಳೆಲ್ಲವೂ ನಿರರ್ಥಕವಾಗುವಂತೆ ವಾಗಾದಿಗಳ ವಾಗ್ವ್ಯವಹಾರವೇ ಮೊದಲಾದುವು ನಿರರ್ಥಕವಾಗುವುವು. ಆದುದರಿಂದ ಪುರದ ಸ್ವಾಮಿಯಂತೆ ನಾನು ಇದಕ್ಕಿಂತ ಭಿನ್ನನೂ ಸ್ವಾಮಿಯೂ ಅಧಿಷ್ಠಾತೃವೂ ಕೃತಾಕೃತಫಲಸಾಕ್ಷಿಯೂ ಭೋಕ್ತೃವೂ ಆಗಿರಬೇಕು.'

[3] ಮುಂಗಾಲು ಮತ್ತು ತಲೆ ಇವೆರಡಲ್ಲಿ ಯಾವ ದಾರಿಯ ಮೂಲಕ ಪ್ರವೇಶಿಸಲಿ?

[4] 'ನನ್ನ ಸ್ವರೂಪವೇನು? ನಾನು ಯಾರಿಗೆ ಸ್ವಾಮಿಯು? ನಾನು ಕಾರ್ಯ ಕರಣಸಂಘಾತವನ್ನು ಪ್ರವೇಶಿಸಿ ಮಾತನಾಡುವುದು ಮೊದಲಾದ ಫಲವನ್ನು ಅರಿತು ಕೊಳ್ಳದಿದ್ದರೆ, ಯಾವನೂ "ಇವನು ಇರುವನು, ಇವನು ಇಂತಹ ಸ್ವರೂಪದವನು" ಎಂದು ಅರಿತುಕೊಳ್ಳಲಾರರು.']

**ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪ-ದ್ಯತ । ಸೈಷಾ ವಿದೃತಿರ್ನಾಮ ದ್ವಾಸ್ತದೇತನ್ನಾಂದನಮ್ । ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾಃ । ಅಯಮಾವಸಥೋಽಯಮಾ-ವಸಥೋಽಯಮಾವಸಥ ಇತಿ ॥ ೧೨ ॥**

ಸಃ=ಅವನು, ಈಶ್ವರನು ಏತಂ ಏವ ಸೀಮಾನಂ=ಇದೇ ತಲೆಬುರುಡೆ ಯನ್ನು ವಿದಾರ್ಯ=ಸೀಳಿಕೊಂಡು ಏತಯಾ=ಈ ಬ್ರಹ್ಮರಂಧ್ರದ ದ್ವಾರಾ= ದ್ವಾರದಿಂದ ಪ್ರಾಪದ್ಯತ=ಪ್ರವೇಶಿಸಿದನು. ಸಾ ಏಷಾ ದ್ವಾಃ=ಆ ಈ ದ್ವಾರವು ವಿದೃತಿಃ ನಾಮ=ವಿದೃತಿ ಎಂಬ ಹೆಸರಿನದು; ತತ್ ಏತತ್=ಆ ಇದು ನಾಂದ-ನಂ=ನಂದನವು. ತಸ್ಯ=ಅವನಿಗೆ ತ್ರಯಃ ಆವಸಥಾಃ=ಮೂರು ವಾಸಸ್ಥಾನ ಗಳು, ತ್ರಯಃ ಸ್ವಪ್ನಾಃ=ಮೂರು ಸ್ವಪ್ನಗಳು. ಅಯಂ ಆವಸಥಃ=ಇದು ವಾಸಸ್ಥಾನ, ಅಯಂ ಆವಸಥಃ ಅಯಂ ಆವಸಥಃ ಇತಿ.

೧೨. ಈಶ್ವರನು ಇದೇ ತಲೆಬುರುಡೆಯನ್ನು[1] ಸೀಳಿಕೊಂಡು ಈ ಬ್ರಹ್ಮರಂಧ್ರದ ದ್ವಾರದಿಂದ (ಒಳಗೆ)[2] ಪ್ರವೇಶಿಸಿದನು. ಆ ಈ ದ್ವಾರವು ವಿದೃತಿ[3] ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ; ಆ ಇದು ನಂದನವು.[4] ಅವನಿಗೆ[5] ಮೂರು ವಾಸಸ್ಥಾನಗಳು,[6] ಮೂರು ಸ್ವಪ್ನಗಳು.[7] ಇದೊಂದು ವಾಸಸ್ಥಾನ, ಇದೊಂದು ವಾಸಸ್ಥಾನ, ಇದೊಂದು ವಾಸಸ್ಥಾನ.[8]

[[1] ತಲೆಚಿಪ್ಪಿನ ಎಲುಬುಗಳ ಅಂಚುಗಳ ಹೊಲಿಗೆಯಂಥ ಸೇರಿಕೆ.

[2] ದೇಹೇಂದ್ರಿಯಸಂಘಾತ.

[3] ದೃ-ಧಾತುವಿಗೆ ಸೀಳು ಎಂದರ್ಥ. ಸೀಳಿಕೊಂಡು ಹೋಗಿದ್ದುದರಿಂದ ಈ ಮಾರ್ಗಕ್ಕೆ ವಿದೃತಿ ಎಂದು ಹೆಸರಾಗಿದೆ.

[4] ಶ್ರೋತ್ರೇಂದ್ರಿಯ ಮೊದಲಾದ ಇತರ ದ್ವಾರಗಳು ಭೃತ್ಯಾದಿಸ್ಥಾನದಲ್ಲಿರುವ ದೇವತೆಗಳಿಗೆ ಸಾಧಾರಣಮಾರ್ಗಗಳಾಗಿರುವುದರಿಂದ ಆನಂದಕ್ಕೆ ಕಾರಣವಾಗಿರುವು ದಿಲ್ಲ. ಇದು ಪರಮೇಶ್ವರನೊಬ್ಬನಿಗೆ ದ್ವಾರವಾಗಿರುವುದರಿಂದ ನಂದನವಾಗಿರುತ್ತದೆ. ನಾಂದನಮ್ ಎಂಬಲ್ಲಿರುವ ದೀರ್ಘವು ಛಾಂದಸವು. ಈ ದ್ವಾರದಿಂದ ಹೋದವನು ಪರಬ್ರಹ್ಮದಲ್ಲಿ ಆನಂದಿಸುತ್ತಾನೆ.

೫ ಹೀಗೆ ಸೃಷ್ಟಿಸಿ ಒಳಗೆ ಜೀವರೂಪದಿಂದ ಪ್ರವೇಶಿಸಿದ ಆತ್ಮನಿಗೆ.

೬ ಜಾಗರಿತಕಾಲದಲ್ಲಿ ಇಂದ್ರಿಯಸ್ಥಾನವಾದ ಬಲಗಣ್ಣು, ಸ್ವಪ್ನಕಾಲದಲ್ಲಿ ಒಳಗಿರುವ ಮನಸ್ಸು, ಸುಷುಪ್ತಿಕಾಲದಲ್ಲಿ ಹೃದಯಾಕಾಶ. ಅಥವಾ ಮುಂದೆ ಹೇಳುವ ಪಿತೃಶರೀರ, ಮಾತೃಗರ್ಭಾಶಯ ಮತ್ತು ತನ್ನ ಶರೀರ.

೭ ಜಾಗ್ರತ್-ಸ್ವಪ್ನ-ಸುಷುಪ್ತಿಗಳು. ಪರಮಾರ್ಥವಾದ ಆತ್ಮಜ್ಞಾನವು ಇಲ್ಲದಿರುವುದರಿಂದ ಸ್ವಪ್ನದಂತೆ ಜಾಗ್ರದವಸ್ಥೆಯಲ್ಲಿಯೂ ಅಸದ್ವಸ್ತುಗಳನ್ನು ಮನುಷ್ಯನು ನೋಡುತ್ತಾನೆ. ಆದುದರಿಂದ ಜಾಗ್ರದವಸ್ಥೆಯನ್ನು ಸ್ವಪ್ನಗಳಲ್ಲಿಯೇ ಸೇರಿಸಿದೆ.

೮ ಮೊದಲನೆಯದು ಬಲಗಣ್ಣು, ಎರಡನೆಯದು ಒಳಗಿರುವ ಮನಸ್ಸು, ಮೂರನೆಯದು ಹೃದಯಾಕಾಶ. ಈ ಮೂರು ವಸತಿಗಳಲ್ಲಿ ಇವನು ಒಂದಾದ ಮೇಲೆ ಮತ್ತೊಂದರಲ್ಲಿ ಆತ್ಮಭಾವದಿಂದ ವರ್ತಿಸುತ್ತ, ಸ್ವಾಭಾವಿಕವಾದ ಅವಿದ್ಯೆಯಿಂದ ದೀರ್ಘಕಾಲ ಮಲಗಿರುತ್ತ ಅನೇಕ ಶತಸಹಸ್ರ ಅನರ್ಥಗಳ ಕೂಡುವಿಕೆಯಿಂದುಂಟಾಗುವ ದುಃಖಗಳೆಂಬ ಮುದ್ಗರಪ್ರಹರಗಳ ಅನುಭವದಿಂದಲೂ ಎಚ್ಚರವಾಗುವುದಿಲ್ಲ.]

**ಸ ಜಾತೋ ಭೂತಾನ್ಯಭಿವ್ಯೈಖ್ಯತ್ ಕಿಮಿಹಾನ್ಯಂ ವಾವದಿಷದಿತಿ । ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯದಿದಮದರ್ಶಮಿತೀ೩ ॥ ೧೩ ॥**

**ಸಃ**=ಅವನು **ಜಾತಃ**=ಹುಟ್ಟಿ **ಭೂತಾನಿ**=ಭೂತಗಳನ್ನು **ಅಭಿವ್ಯೈಖ್ಯತ್**=ವ್ಯಾಕೃತಮಾಡಿದನು, ವ್ಯಕ್ತಪಡಿಸಿದನು; **ಇತಿ** [**ಯಸ್ಮಾತ್**]=ಏಕೆಂದರೆ **ಇಹ**=ಇಲ್ಲಿ **ಅನ್ಯಂ ಕಿಂ ವಾವದಿಷತ್**=ಇನ್ನೇನಾದರೂ ಹೇಳಿದನೆ? **ಸಃ**=ಅವನು **ಏತಂ**=ಈ **ಪುರುಷಂ ಏವ**=ಪುರುಷನನ್ನೇ **ತತಮಂ** [**ತತ-ತಮಂ**]=ಪರಿಪೂರ್ಣವಾದ **ಬ್ರಹ್ಮ**=ಬ್ರಹ್ಮವೆಂದು **ಅಪಶ್ಯತ್**=ಅರಿತುಕೊಂಡನು: **ಇದಂ ಅದರ್ಶಂ**=ಇದನ್ನು ನೋಡಿದೆನು **ಇತೀ೩**=ಅಹೋ ಎಂದು; 'ಇತೀ' ಎಂಬಲ್ಲಿ ಪ್ಲುತವು ಬಂದಿರುವುದು 'ಅಹೋ' ಎಂದು ವಿಚಾರಣಾರ್ಥವನ್ನು ತಿಳಿಸುವುದಕ್ಕೆ.

**೧೩.** ಅವನು ಹುಟ್ಟಿ,೧ ಭೂತಗಳನ್ನು೨ ವ್ಯಕ್ತಪಡಿಸಿದನು;೩ ಏಕೆಂದರೆ ಅವನು ಇನ್ನೇನಾದರೂ ಹೇಳಿದನೆ?೪ ಅವನು ಈ ಪುರುಷನನ್ನೇ ಪರಿಪೂರ್ಣವಾದ ಬ್ರಹ್ಮವೆಂದು (ಹೀಗೆ) ಅರಿತುಕೊಂಡನು:೫ 'ಅಹೋ! ಇದನ್ನು ನೋಡಿದೆನು.'೬

[೧ ದೇಹದಲ್ಲಿ ಜೀವಾತ್ಮಭಾವವನ್ನು ಹೊಂದಿ; ಆತ್ಮನಿಗೆ ಇದೇ ಜನ್ಮ.

೨ ಪಂಚಭೂತಮಯಗಳಾದ ಶರೀರಗಳನ್ನು.

೩ ಅವನು ಸಮಸ್ತ ಶರೀರಗಳನ್ನು ನೋಡಿ, ಅವುಗಳೊಂದಿಗೆ ಅಭೇದವನ್ನು ಹೊಂದಿ 'ನಾನು ಮನುಷ್ಯ', 'ನಾನು ಕುರುಡ', 'ನಾನು ಸುಖಿ' ಎಂದು ಅರಿತುಕೊಂಡನು.

[೪] ಅವನು ಇನ್ನೇನನ್ನೂ ನೋಡಲಿಲ್ಲ, ತನ್ನನ್ನು ಬಿಟ್ಟು ಯಾರನ್ನು ಕುರಿತೂ ಮಾತನಾಡಲಿಲ್ಲ; ಅವನು ಯಾವ ಭೇದವನ್ನೂ ನೋಡದಿದ್ದುದರಿಂದ ಜೀವಾತ್ಮ ನೊಂದಿಗೆ ಐಕ್ಯವನ್ನು ಪಡೆದನು.

[೫] ಅದೃಷ್ಟವಶಾತ್ ಪರಮಕಾರುಣಿಕನಾದ ಒಬ್ಬ ಆಚಾರ್ಯನು ಆತ್ಮಜ್ಞಾನ ವನ್ನು ಉಂಟುಮಾಡುವಂಥ ಶಬ್ದವುಳ್ಳ ವೇದಾಂತಮಹಾಭೇರಿಯನ್ನು ಇವನ ಕಿವಿಯ ಸಮೀಪದಲ್ಲಿ ಹೊಡೆಯಲು ಅವನು ಹೀಗೆ ಅರಿತುಕೊಂಡನು: 'ಸೃಷ್ಟ್ಯಾದಿ ಗಳ ಕರ್ತೃವೆಂದು ಪ್ರಕೃತನಾಗಿರುವ ಪುರುಷನೇ (ಪುರದಲ್ಲಿ ಮಲಗಿರುವ ಆತ್ಮನೇ) ಸರ್ವವ್ಯಾಪಿಯಾಗಿರುವ ಬ್ರಹ್ಮವು (ಬೃಹತ್ತಾಗಿರುವುದರಿಂದ ಬ್ರಹ್ಮ'.)

[೬] 'ಈ ಬ್ರಹ್ಮವೇ ನನ್ನ ಆತ್ಮಸ್ವರೂಪ.']

**ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ। ತಮಿಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ। ಪರೋಕ್ಷಪ್ರಿಯಾ ಇವ ಹಿ ದೇವಾಃ ಪರೋಕ್ಷಪ್ರಿಯಾ ಇವ ಹಿ ದೇವಾಃ ॥ ೧೪ ॥**

**ಇತಿ ಐತರೇಯೋಪನಿಷದಿ ಪ್ರಥಮೋಽಧ್ಯಾಯೇ ತೃತೀಯಃ ಖಂಡಃ**

**ತಸ್ಮಾತ್**=ಆದುದರಿಂದ **ಇದಂದ್ರಃ ನಾಮ**=ಇವನ ಹೆಸರು ಇದಂದ್ರ. **ಇದಂದ್ರಃ ಹ ವೈ ನಾಮ**=ಇದಂದ್ರನೆಂದು ಪ್ರಸಿದ್ಧನಾದನು. **ತಂ ಇದಂದ್ರಂ ಸಂತಂ**=ಇದಂದ್ರನಾದ ಅವನನ್ನು **ಇಂದ್ರಃ ಇತಿ**=ಇಂದ್ರನೆಂದು **ಪರೋಕ್ಷೇಣ**= ಪರೋಕ್ಷವಾಗಿ **ಆಚಕ್ಷತೇ**=ಕರೆಯುತ್ತಾರೆ. **ಹಿ**=ಏಕೆಂದರೆ **ದೇವಾಃ**=ದೇವತೆ ಗಳು **ಪರೋಕ್ಷಪ್ರಿಯಾಃ ಇವ**=ಪರೋಕ್ಷಪ್ರಿಯರೇ, **ಹಿ ದೇವಾಃ ಪರೋಕ್ಷ- ಪ್ರಿಯಾಃ ಇವ.**

**೧೪.** ಆದುದರಿಂದ[೧] ಇವನ ಹೆಸರು ಇದಂದ್ರ. ಇವನು ಇದಂದ್ರ ನೆಂದು ಪ್ರಸಿದ್ಧನಾದನು. ಇದಂದ್ರನಾದ ಅವನನ್ನು ಇಂದ್ರನೆಂದು ಪರೋಕ್ಷ ವಾಗಿ ಕರೆಯುತ್ತಾರೆ.[೨] ಏಕೆಂದರೆ ದೇವತೆಗಳು ಪರೋಕ್ಷಪ್ರಿಯರೇ,[೩] ದೇವತೆಗಳು ಪರೋಕ್ಷಪ್ರಿಯರೇ.

[[೧] ಸಾಕ್ಷಾತ್ತಾಗಿಯೂ ಅಪರೋಕ್ಷವಾಗಿಯೂ ಸರ್ವಾಂತರವಾಗಿಯೂ ಇರುವ ಬ್ರಹ್ಮನನ್ನು ಇದಮ್, ಇದು ಎಂದು ಅಪರೋಕ್ಷವಾಗಿ ಅರಿತುಕೊಂಡುದರಿಂದ ಪರಮಾತ್ಮನು ಇದಂದ್ರನೆಂದು ಪ್ರಸಿದ್ಧನಾದನು.

[೨] ಪರಮಾತ್ಮನು ಪೂಜ್ಯತಮನಾದುದರಿಂದ ಬ್ರಹ್ಮಜ್ಞಾನಿಗಳು ಅವನನ್ನು ಪ್ರತ್ಯಕ್ಷನಾಮದಿಂದ ಕರೆಯಲು ಹೆದರುತ್ತಾರೆ; ಆದುದರಿಂದ ವ್ಯವಹಾರಕ್ಕಾಗಿ 'ಇಂದ್ರ' ಎಂದು ಪರೋಕ್ಷನಾಮದಿಂದ ಕರೆಯುತ್ತಾರೆ.

[೩] ದೇವತೆಗಳೂ ಪರೋಕ್ಷನಾಮಪ್ರಿಯರು, ಸರ್ವದೇವತೆಗಳಿಗೆ ದೇವನಾದ ಮಹೇಶ್ವರನೂ ಪರೋಕ್ಷಪ್ರಿಯನು.]

# ಎರಡನೆಯ ಅಧ್ಯಾಯ

## ಮೊದಲನೆಯ ಖಂಡ

**ಓಂ ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ ಯದೇತದ್ರೇತಃ । ತದೇತತ್ ಸರ್ವೇಭ್ಯೋಽಂಗೇಭ್ಯಸ್ತೇಜಃ ಸಂಭೂತಮಾತ್ಮನ್ಯೇವಾತ್ಮಾನಂ ಬಿಭರ್ತಿ; ತದ್ಯದಾ ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ; ತದಸ್ಯ ಪ್ರಥಮಂ ಜನ್ಮ ॥ ೧ ॥**

**ಅಯಂ**=ಈ ಜೀವಾತ್ಮನು **ಆದಿತಃ**=ಮೊದಲು **ಪುರುಷೇ**=ಪುರುಷನಲ್ಲಿ **ಗರ್ಭಃ ಭವತಿ**=ಗರ್ಭವಾಗುತ್ತಾನೆ, **ಹ ವೈ ಯತ್ ಏತತ್ ರೇತಃ**=ಯಾವುದು ರೇತಸ್ಸೆಂದು ಪ್ರಸಿದ್ಧವಾಗಿದೆಯೊ. **ತತ್ ಏತತ್**=ಆ ಈ [ರೇತಸ್ಸು] **ಸರ್ವೇಭ್ಯಃ ಅಂಗೇಭ್ಯಃ**=ಸಮಸ್ತ ಅಂಗಗಳಿಂದ **ತೇಜಃ ಸಂಭೂತಂ**=ತೇಜಸ್ಸಾಗಿ ಉತ್ಪನ್ನವಾಗಿರುತ್ತದೆ; [ತಂ] **ಆತ್ಮಾನಂ**=ರೇತೋರೂಪದಿಂದ ಗರ್ಭವಾಗಿರುವ ಆ ಆತ್ಮನನ್ನು **ಆತ್ಮನಿ ಏವ**=ತನ್ನಲ್ಲಿಯೇ **ಬಿಭರ್ತಿ**=ಧರಿಸುತ್ತಾನೆ. **ಯದಾ**=ಯಾವಾಗ **ತತ್**=ಅದನ್ನು **ಸ್ತ್ರಿಯಾಂ**=ಸ್ತ್ರೀಯಲ್ಲಿ **ಸಿಂಚತಿ**=ಸೇಚನಮಾಡುತ್ತಾನೆಯೊ **ಅಥ**=ಆಗ **ಏನತ್**=ಇದನ್ನು **ಜನಯತಿ**=ಉತ್ಪತ್ತಿಮಾಡುತ್ತಾನೆ. **ತತ್**=ಅದು **ಅಸ್ಯ**=ಇವನ **ಪ್ರಥಮಂ ಜನ್ಮ**=ಮೊದಲನೆಯ ಜನ್ಮವು.

**೧.** ಈ ಜೀವಾತ್ಮನು[೧] ಮೊದಲು ಪುರುಷನಲ್ಲಿ ರೇತೋರೂಪವಾದ ಗರ್ಭವಾಗುತ್ತಾನೆ. ಆ ಈ ರೇತಸ್ಸು ಸರ್ವಾಂಗಗಳಿಂದ ತೇಜಸ್ಸಾಗಿ[೨] ಉತ್ಪನ್ನವಾಗಿರುತ್ತದೆ; ರೇತೋರೂಪದಿಂದ ಗರ್ಭವಾಗಿರುವ ಆ ಆತ್ಮನನ್ನು[೩] ತನ್ನಲ್ಲಿಯೇ[೪] ಧರಿಸುತ್ತಾನೆ. ಅದನ್ನು ಯಾವಾಗ ಸ್ತ್ರೀಯಲ್ಲಿ ಸೇಚನಮಾಡುತ್ತಾನೆಯೊ ಆಗ ಇದನ್ನು[೫] ಉತ್ಪತ್ತಿಮಾಡುತ್ತಾನೆ. ಅದು ಇವನ ಮೊದಲನೆಯ ಜನ್ಮವು.

[೧ ಅವಿದ್ಯಾಕಾಮಕರ್ಮಗಳ ಅಭಿಮಾನವುಳ್ಳವನಾಗಿ, ಯಜ್ಞಾದಿಕರ್ಮಗಳನ್ನು ಮಾಡಿ, ಈ ಲೋಕದಿಂದ ಧೂಮಾದಿಕ್ರಮದಲ್ಲಿ ಚಂದ್ರನನ್ನು ಹೊಂದಿ, ಕರ್ಮವು ಕ್ಷೀಣವಾದ ಮೇಲೆ ವೃಷ್ಟ್ಯಾದಿಕ್ರಮದಿಂದ ಈ ಲೋಕವನ್ನು ಸೇರಿ, ಅನ್ನವಾಗಿ ಪುರುಷಾಗ್ನಿಯಲ್ಲಿ ಹೋಮಮಾಡಲ್ಪಡುತ್ತಾನೆ.

೨ ಶರೀರದ ಸಾರವಾಗಿ.

೩ ಈ ರೇತಸ್ಸು ಪುರುಷನ ಆತ್ಮನಾಗಿರುವುದರಿಂದ ಆತ್ಮನೆಂದು ಹೇಳಲ್ಪಟ್ಟಿದೆ.

[೪] ಶರೀರದಲ್ಲಿಯೇ.
[೫] ತನ್ನ ಗರ್ಭರೂಪವಾಗಿರುವ ರೇತಸ್ಸನ್ನು.]

ತತ್ ಸ್ತ್ರಿಯಾ ಆತ್ಮಭೂಯಂ ಗಚ್ಛತಿ, ಯಥಾ ಸ್ವಮಂಗಂ ತಥಾ । ತಸ್ಮಾದೇನಾಂ ನ ಹಿನಸ್ತಿ; ಸಾಽಸ್ಯೈತಮಾತ್ಮಾನಮತ್ರ ಗತಂ ಭಾವಯತಿ ॥ ೨ ॥

ತತ್=ಅದು ಸ್ತ್ರಿಯಾಃ=ಸ್ತ್ರೀಯ ಆತ್ಮಭೂಯಂ ಗಚ್ಛತಿ=ಆತ್ಮಾಭಿನ್ನತೆಯನ್ನು ಎಂದರೆ ಆತ್ಮರೂಪವನ್ನು ಹೊಂದುತ್ತದೆ, ಯಥಾ=ಹೇಗೆ ಸ್ವಂ=ತನ್ನ ಅಂಗಂ=ಅಂಗವೊ ತಥಾ=ಹಾಗೆ. ತಸ್ಮಾತ್=ಆದುದರಿಂದ ಏನಾಂ=ಇವಳನ್ನು ನ ಹಿನಸ್ತಿ=ಹಿಂಸಿಸುವುದಿಲ್ಲ; ಸಾ=ಅವಳು ಅತ್ರ=ಇಲ್ಲಿ ಗತಂ=ಸೇರಿದ ಅಸ್ಯ=ಇವನ, ಪುರುಷನ ಏತಂ=ಈ ಆತ್ಮಾನಂ=ಆತ್ಮನನ್ನು ಭಾವಯತಿ=ಪಾಲಿಸುತ್ತಾಳೆ.

೨. ಅದು[೧] ಸ್ತ್ರೀಯ ಆತ್ಮರೂಪವನ್ನು—ಆಕೆಯ ಅಂಗವು ಹೇಗೊ ಹಾಗೆ—ಹೊಂದುತ್ತದೆ. ಆದುದರಿಂದ (ಆ ಗರ್ಭವು) ಇವಳನ್ನು ಹಿಂಸಿಸುವುದಿಲ್ಲ. ಅವಳು ಇಲ್ಲಿ[೨] ಸೇರಿದ ಇವನ ಈ ಆತ್ಮನನ್ನು ಪಾಲಿಸುತ್ತಾಳೆ.

[[೧] ಆ ರೇತಸ್ಸು.
[೨] ಉದರದಲ್ಲಿ.]

ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ । ತಂ ಸ್ತ್ರೀ ಗರ್ಭಂ ಬಿಭರ್ತಿ ಸೋಽಗ್ರ ಏವ ಕುಮಾರಂ ಜನ್ಮನೋಽಗ್ರೇಽಧಿಭಾವಯತಿ । ಸ ಯತ್ ಕುಮಾರಂ ಜನ್ಮನೋಽಗ್ರೇಽಧಿಭಾವಯತ್ಯಾತ್ಮಾನಮೇವ ತದ್ಭಾವಯತ್ಯೇಷಾಂ ಲೋಕಾನಾಂ ಸಂತತ್ಯಾ; ಏವಂ ಸಂತತಾ ಹೀಮೇ ಲೋಕಾಸ್ತದಸ್ಯ ದ್ವಿತೀಯಂ ಜನ್ಮ ॥ ೩ ॥

ಸಾ ಭಾವಯಿತ್ರೀ=ಪಾಲಿಸುವ ಅವಳು ಭಾವಯಿತವ್ಯಾ ಭವತಿ=ಪಾಲಿಸಲ್ಪಡತಕ್ಕವಳಾಗುತ್ತಾಳೆ. ಸ್ತ್ರೀ=ಸ್ತ್ರೀಯು ತಂ ಗರ್ಭಂ=ಆ ಗರ್ಭವನ್ನು ಅಗ್ರೇ=[ಜನ್ಮಕ್ಕೆ] ಮೊದಲು ಬಿಭರ್ತಿ=ಧರಿಸುತ್ತಾಳೆ. ಸಃ=ಅವನು, ತಂದೆಯು ಅಗ್ರೇ ಏವ=ಮೊದಲೇ ಜನ್ಮನಃ ಅಧಿ=ಹುಟ್ಟಿದ ಮೇಲೆ ಕುಮಾರಂ=ಸಂತಾನವನ್ನು ಭಾವಯತಿ=ಪಾಲಿಸುತ್ತಾನೆ. ಯತ್=ಯಾವ ಕಾರಣದಿಂದ ಸಃ=ಆ ತಂದೆಯು ಕುಮಾರಂ=ಸಂತಾನವನ್ನು ಅಗ್ರೇ ಏವ=ಮೊದಲೇ ಜನ್ಮನಃ ಅಧಿ=ಹುಟ್ಟಿದ ಮೇಲೆ ಭಾವಯತಿ=ಪಾಲಿಸುತ್ತಾನೆಯೊ ತತ್=ಆ ಕಾರಣದಿಂದ ಏಷಾಂ=ಈ ಲೋಕಾನಾಂ=ಲೋಕಗಳ ಸಂತತ್ಯೈ=ಸಂತತಿಗೋಸ್ಕರ

ಆತ್ಮಾನಂ ಏವ=ತನ್ನನ್ನೇ ಭಾವಯತಿ=ಪಾಲಿಸಿಕೊಳ್ಳುತ್ತಾನೆ. ಏವಂ=ಹೀಗೆ ಇಮೇ ಲೋಕಾಃ = ಈ ಲೋಕಗಳು ಸಂತತಾಃ = ಅವಿಚ್ಛಿನ್ನವಾಗಿರುತ್ತವೆ. ತತ್=ಅದು ಅಸ್ಯ=ಇವನ ದ್ವಿತೀಯಂ ಜನ್ಮ=ಎರಡನೆಯ ಜನ್ಮವು.

೩. (ತನ್ನ ಗರ್ಭವಾಗಿರುವ ಪತಿಯ ಆತ್ಮನನ್ನು) ಪಾಲಿಸುತ್ತಿರುವ ಅವಳು (ಪತಿಯಿಂದ) ಪಾಲಿಸಲ್ಪಡಲು ಅರ್ಹಳಾಗುತ್ತಾಳೆ. ಸ್ತ್ರೀಯು ಆ ಗರ್ಭವನ್ನು ಜನ್ಮಕ್ಕೆ ಮೊದಲೇ ಧರಿಸುತ್ತಾಳೆ. ಅವನು (ತಂದೆಯು) ಮೊದಲೇ, ಹುಟ್ಟಿದ ಕೂಡಲೇ, ಸಂತಾನವನ್ನು ಪಾಲಿಸುತ್ತಾನೆ.[೧] ಅವನು ಮೊದಲೇ, ಹುಟ್ಟಿದ ಕೂಡಲೇ, ಸಂತಾನವನ್ನು ಪಾಲಿಸುವುದರಿಂದ ಈ ಲೋಕಗಳ ಸಂತತಿಗೋಸ್ಕರ ತನ್ನನ್ನೇ ಪಾಲಿಸಿಕೊಳ್ಳುತ್ತಾನೆ.[೨] ಹೀಗೆ ಈ ಲೋಕಗಳು ಅವಿಚ್ಛಿನ್ನವಾಗಿರುತ್ತವೆ. ಅದು[೩] ಇವನ ಎರಡನೆಯ ಜನ್ಮ.[೪]

[[೧] ಜಾತಕರ್ಮಾದಿಗಳಿಂದ.

[೨] ಪುತ್ರೋತ್ಪಾದನಾದಿ ಕರ್ಮಗಳು ಲೋಕಗಳ ಸಂತತಿಗೋಸ್ಕರ ಮಾಡಲ್ಪಡುತ್ತವೆ; ಮೋಕ್ಷಕ್ಕಲ್ಲ.

[೩] ತಾಯಿಯ ಉದರದಿಂದ ನಿರ್ಗಮನವು.

[೪] ರೇತೋರೂಪಕ್ಕೆ ಹೋಲಿಸಿದರೆ ಇದು ದ್ವಿತೀಯಜನ್ಮ.]

**ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ। ಅಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ। ಸ ಇತಃ ಪ್ರಯನ್ನೇವ ಪುನರ್ಜಾಯತೇ; ತದಸ್ಯ ತೃತೀಯಂ ಜನ್ಮ ॥ ೪ ॥**

ಅಸ್ಯ=ಇವನ, ತಂದೆಯ ಸಃ ಅಯಂ ಆತ್ಮಾ=ಆ ಈ ಆತ್ಮನು, ಮಗನು ಪುಣ್ಯೇಭ್ಯಃ=ಪುಣ್ಯವಾದ ಕರ್ಮಭ್ಯಃ=ಕರ್ಮಗಳಿಗೆ ಪ್ರತಿಧೀಯತೇ=ಪ್ರತಿನಿಧಿಯಾಗಿ ಮಾಡಲ್ಪಡುತ್ತಾನೆ. ಅಥ=ಅನಂತರ ಅಸ್ಯ=ಇವನ, ಮಗನ ಇತರಃ=ಬೇರೆ ಅಯಂ=ಈ ಆತ್ಮಾ=ಆತ್ಮನು, ತಂದೆಯು ಕೃತಕೃತ್ಯಃ=ಕೃತಕೃತ್ಯನಾಗಿ ವಯೋಗತಃ = ಜರಾಜೀರ್ಣನಾಗಿ ಪ್ರೈತಿ = ಹೋಗುತ್ತಾನೆ. ಸಃ = ಅವನು, ತಂದೆಯು ಇತಃ=ಇಲ್ಲಿಂದ ಪ್ರಯನ್ ಏವ=ಶರೀರವನ್ನು ಬಿಡುತ್ತಲೇ ಪುನಃ ಜಾಯತೇ=ಪುನಃ ಹುಟ್ಟುತ್ತಾನೆ; ತತ್=ಅದು ಅಸ್ಯ=ಇವನ ತೃತೀಯಂ ಜನ್ಮ=ಮೂರನೆಯ ಜನ್ಮವು.

೪. ತಂದೆಯ (ಪುತ್ರರೂಪನಾದ) ಆ ಈ ಆತ್ಮನು ಪುಣ್ಯಕರ್ಮಗಳ (ಆಚರಣೆಗಳಿಗೋಸ್ಕರ) ಪ್ರತಿನಿಧಿಯಾಗಿ[೧] ಮಾಡಲ್ಪಡುತ್ತಾನೆ. ಅನಂತರ ಮಗನ (ಪಿತೃರೂಪನಾದ) ಈ ಬೇರೆ ಆತ್ಮನು ಕೃತಕೃತ್ಯನೂ[೨] ಜರಾ

ಜೀರ್ಣನೂ ಆಗಿ ಹೊರಟುಹೋಗುತ್ತಾನೆ. ಅವನು ಇಲ್ಲಿಂದ ಶರೀರವನ್ನು ಬಿಡುತ್ತಲೇ ಪುನಃ ಹುಟ್ಟುತ್ತಾನೆ; ಅದು ಇವನ ಮೂರನೆಯ ಜನ್ಮವು.

[[1] ತಂದೆಯು ಏನು ಮಾಡಬೇಕೋ ಅವನ್ನು ಮಾಡಲು ಪ್ರತಿನಿಧಿಯಾಗುತ್ತಾನೆ. [2] ಋಣತ್ರಯದಿಂದ ಮುಕ್ತನಾಗಿ.]

**ತದುಕ್ತಮೃಷಿಣಾ—**

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ । ಶತಂ ಮಾ ಪುರ ಆಯಸೀರರಕ್ಷನ್ನಧಃ ಶ್ಯೇನೋ ಜವಸಾ ನಿರದೀಯಮಿತಿ ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚ ॥ ೫ ॥**

**ತತ್** = ಇದು **ಋಷಿಣಾ** = ಋಷಿಯಿಂದ **ಉಕ್ತಂ** = ಹೇಳಲ್ಪಟ್ಟಿದೆ— **ಅಹಂ** = ನಾನು **ಗರ್ಭೇ ನು ಸನ್** = ಗರ್ಭದಲ್ಲಿರುವಾಗಲೇ **ಏಷಾಂ** = ಈ **ದೇವಾನಾಂ** = ದೇವತೆಗಳ **ವಿಶ್ವಾ** = ಎಲ್ಲ **ಜನಿಮಾನಿ** = ಜನ್ಮಗಳನ್ನು **ಅನ್ವವೇದಂ** = ಅರಿತುಕೊಂಡೆನು. **ಶತಂ** = ನೂರು, ಅನೇಕ **ಆಯಸೀಃ [ಆಯಸ್ಯಃ]** = ಕಬ್ಬಿಣದ **ಪುರಃ** = ಪುರಗಳು **ಮಾ** = ನನ್ನನ್ನು **ಅಧಃ** = ಅಧೋಲೋಕಗಳಲ್ಲಿ **ಅರಕ್ಷನ್** = ರಕ್ಷಿಸಿಕೊಂಡಿದ್ದುವು; [**ಅಥ** = ಅನಂತರ] **ಶ್ಯೇನಃ [ಇವ]** = ಗಿಡುಗನಂತೆ **ಜವಸಾ** = ವೇಗದಿಂದ **ನಿರದೀಯಂ** = ಹೊರಕ್ಕೆ ಬಂದಿರುತ್ತೇನೆ **ಇತಿ** = ಎಂದು **ಏವಂ** = ಹೀಗೆ **ವಾಮದೇವಃ** = ವಾಮದೇವನು **ಏತತ್** = ಇದನ್ನು **ಗರ್ಭೇ ಏವ ಶಯಾನಃ** = ಗರ್ಭದಲ್ಲಿ ಮಲಗಿಕೊಂಡಿರುವಾಗಲೇ **ಉವಾಚ** = ಹೇಳಿದನು.

**೫.** ಇದು[1] ಋಷಿಯಿಂದ ಹೇಳಲ್ಪಟ್ಟಿದೆ:[2] 'ನಾನು ಗರ್ಭದಲ್ಲಿರುವಾಗಲೇ ಈ ದೇವತೆಗಳ[3] ಜನ್ಮಗಳೆಲ್ಲವನ್ನೂ ಅರಿತುಕೊಂಡೆನು. ನೂರಾರು ಕಬ್ಬಿಣದ ಪುರಗಳು[4] ನನ್ನನ್ನು ಅಧೋಲೋಕಗಳಲ್ಲಿ ರಕ್ಷಿಸಿಕೊಂಡಿದ್ದುವು;[5] (ಅನಂತರ) ಗಿಡುಗನಂತೆ ವೇಗದಿಂದ[6] ಹೊರಕ್ಕೆ ಬಂದಿರುತ್ತೇನೆ.' ಹೀಗೆ ವಾಮದೇವನು ಗರ್ಭದಲ್ಲಿ ಮಲಗಿಕೊಂಡಿರುವಾಗಲೇ ಇದನ್ನು ಹೇಳಿದನು.

[[1] ಹೀಗೆ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯದ ಅಭಿವ್ಯಕ್ತಿಯ ಮೂಲಕ ಸಂಸರಿಸುತ್ತ, ಜನ್ಮಮರಣಗಳಲ್ಲಿ ಸಿಕ್ಕಿಬಿದ್ದು, ಪ್ರತಿಯೊಬ್ಬನೂ ಸಂಸಾರ ಸಮುದ್ರದಲ್ಲಿ ಮುಳುಗಿರುತ್ತಾನೆ. ಅವನು ಹೇಗಾದರೂ ಯಾವ ಅವಸ್ಥೆಯಲ್ಲಿಯೇ ಆಗಲಿ ಶ್ರುತ್ಯುಕ್ತನಾದ ಆತ್ಮನನ್ನು ಅರಿತುಕೊಂಡರೆ ಆಗಲೇ ಸರ್ವಸಂಸಾರಬಂಧನಗಳಿಂದ ಮುಕ್ತನಾಗಿ ಕೃತಕೃತ್ಯನಾಗುತ್ತಾನೆ. ಈ ವಿಷಯವು ಋಷಿಯಿಂದ ಹೇಳಲ್ಪಟ್ಟಿದೆ.

[2] ಋಗ್ವೇದ, ೪, ೨೭, ೧.

[3] ವಾಗಗ್ನಿ ಮೊದಲಾದ ದೇವತೆಗಳ.

[4] ಕಬ್ಬಿಣದಂತೆ ಅಭೇದ್ಯವಾದ ಶರೀರಗಳು.

[5] ಸಂಸಾರಪಾಶದಿಂದ ತಪ್ಪಿಸಿಕೊಂಡು ಹೊರಕ್ಕೆ ಬಾರದಂತೆ ಅನೇಕ ಶರೀರಗಳು ನನ್ನನ್ನು ಬಂಧಿಸಿದ್ದುವು.

[6] ಆತ್ಮಜ್ಞಾನದಿಂದ ಉತ್ಪನ್ನವಾದ ಸಾಮರ್ಥ್ಯದಿಂದ.]

**ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾ-ಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ ಸಮಭವತ್ ॥ ೬ ॥**

**ಇತಿ ಐತರೇಯೋಪನಿಷದಿ ದ್ವಿತೀಯೋಽಧ್ಯಾಯೇ ಪ್ರಥಮಃ ಖಂಡಃ ॥**

**ಸಃ**=ಅವನು, ವಾಮದೇವನು **ಏವಂ**=ಹೀಗೆ **ವಿದ್ವಾನ್**=ಅರಿತುಕೊಂಡವನಾಗಿ **ಅಸ್ಮಾತ್ ಶರೀರಭೇದಾತ್** = ಈ ಶರೀರವಿನಾಶದಿಂದ **ಊರ್ಧ್ವಃ ಉತ್ಕ್ರಮ್ಯ**=ಮೇಲಕ್ಕೇರಿ **ಅಮುಷ್ಮಿನ್ ಸ್ವರ್ಗೇ ಲೋಕೇ**=ಆ ಸ್ವರ್ಗಲೋಕದಲ್ಲಿ **ಸರ್ವಾನ್ ಕಾಮಾನ್** = ಎಲ್ಲ ಕಾಮಗಳನ್ನು **ಆಪ್ತ್ವಾ** = ಹೊಂದಿ **ಅಮೃತಃ ಸಮಭವತ್**=ಅಮೃತನಾದನು **ಸಮಭವತ್**=ಅಮೃತನಾದನು.

**೬.** ವಾಮದೇವನು ಹೀಗೆ (ಆತ್ಮನನ್ನು) ಅರಿತುಕೊಂಡವನಾಗಿ ಈ ಶರೀರನಾಶವಾದ ಮೇಲೆ[1] ಮೇಲಕ್ಕೇರಿ[2] ಆ ಸ್ವರ್ಗಲೋಕದಲ್ಲಿ[3] ಸರ್ವ ಕಾಮಗಳನ್ನು ಹೊಂದಿ ಅಮೃತನಾದನು,[4] ಅಮೃತನಾದನು.

[[1] ಶರೀರೋತ್ಪತ್ತಿಗೆ ಬೀಜವಾಗಿದ್ದ ಅವಿದ್ಯೆಯೆಂಬ ನಿಮಿತ್ತವು ನಾಶವಾದುದರಿಂದ ಶರೀರವು ನಾಶವಾಗುತ್ತದೆ. ಈ ಶರೀರನಾಶವು ಪರಮಾತ್ಮಜ್ಞಾನಾಮೃತದ ಉಪಯೋಗದಿಂದ ಉತ್ಪನ್ನವಾಗುವ ವೀರ್ಯದಿಂದ ಉಂಟಾಗುತ್ತದೆ.

[2] ಪರಮಾತ್ಮಸ್ವರೂಪನಾಗಿ ಅಧೋಭಾವವಾದ ಸಂಸಾರದಿಂದ ಊರ್ಧ್ವಗಾಮಿಯಾಗಿ ಎಂದರೆ ಜ್ಞಾನದಿಂದ ಪ್ರಕಾಶಿಸಲ್ಪಟ್ಟ ಅಮಲ-ಸರ್ವಾತ್ಮಭಾವವನ್ನು ಹೊಂದಿದವನಾಗಿ.

[3] ತನ್ನ ಆತ್ಮವಾಗಿರುವ ತನ್ನ ಸ್ವರೂಪದಲ್ಲಿ.

[4] ಆತ್ಮಜ್ಞಾನದಿಂದ ಮೊದಲೇ ಆಪ್ತಕಾಮನಾಗಿ ಜೀವಂತನಾಗಿರುವಾಗಲೇ ಸರ್ವಕಾಮಗಳನ್ನೂ ಹೊಂದಿದನು ಎಂದರ್ಥ.]

# ಮೂರನೆಯ ಅಧ್ಯಾಯ

## ಮೊದಲನೆಯ ಖಂಡ

ಓಂ ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಃ ಸ ಆತ್ಮಾ । ಯೇನ ವಾ [ರೂಪಂ] ಪಶ್ಯತಿ, ಯೇನ ವಾ [ಶಬ್ದಂ] ಶೃಣೋತಿ, ಯೇನ ವಾ ಗಂಧಾನಾಜಿಘ್ರತಿ, ಯೇನ ವಾ ವಾಚಂ ವ್ಯಾಕರೋತಿ, ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ ॥ ೧ ॥

ವಯಂ=ನಾವು ಅಯಂ ಆತ್ಮಾ ಇತಿ=ಇವನು ಆತ್ಮನು ಎಂದು [ಯಂ=ಯಾವನನ್ನು] ಉಪಾಸ್ಮಹೇ=ಉಪಾಸಿಸುತ್ತೇವೆಯೊ [ಸಃ=ಅವನು] ಕಃ=ಯಾರು? ಸಃ ಆತ್ಮಾ ಕತರಃ=ಇವರಿಬ್ಬರಲ್ಲಿ ಆತ್ಮನು ಯಾರು? ಯೇನ ವಾ [ಚಕ್ಷುರ್ಭೂತೇನ]=[ಚಕ್ಷುರಿಂದ್ರಿಯವಾದ] ಯಾವುದರಿಂದ [ರೂಪಂ=ರೂಪವನ್ನು] ಪಶ್ಯತಿ=ನೋಡುತ್ತಾನೆಯೊ, ಯೇನ ವಾ [ಶ್ರೋತ್ರಭೂತೇನ ಶಬ್ದಂ] ಶೃಣೋತಿ=[ಶ್ರೋತ್ರವಾದ] ಯಾವುದರಿಂದ [ಶಬ್ದವನ್ನು] ಕೇಳುತ್ತಾನೆಯೊ, ಯೇನ ವಾ [ಘ್ರಾಣಭೂತೇನ] ಗಂಧಾನ್ ಆಜಿಘ್ರತಿ=[ಘ್ರಾಣವಾದ] ಯಾವುದರಿಂದ ವಾಸನೆಗಳನ್ನು ಆಘ್ರಾಣಿಸುತ್ತಾನೆಯೊ, ಯೇನ ವಾ [ವಾಕ್ಕರಣಭೂತೇನ] ವಾಚಂ ವ್ಯಾಕರೋತಿ =[ವಾಗಿಂದ್ರಿಯವಾದ] ಯಾವುದರಿಂದ ಮಾತನಾಡುತ್ತಾನೆಯೊ, ಯೇನ ವಾ [ಜಿಹ್ವಾಭೂತೇನ] ಸ್ವಾದು ಚ ಅಸ್ವಾದು ಚ ವಿಜಾನಾತಿ=[ಜಿಹ್ವೆಯಾದ] ಯಾವುದರಿಂದ ಸ್ವಾದುವಾಗಿರುವುದನ್ನೂ ಅಸ್ವಾದುವಾಗಿರುವುದನ್ನೂ ಅರಿಯುತ್ತಾನೆಯೊ [ಸಃ ಏವ ಆತ್ಮಾ=ಅವನೇ ಆತ್ಮನು].

೧. ನಾವು 'ಇವನು ಆತ್ಮ'[೧] ಎಂದು (ಯಾವನನ್ನು) ಉಪಾಸಿಸುತ್ತೇವೆಯೊ (ಅವನು) ಯಾರು? ಇವರಿಬ್ಬರಲ್ಲಿ ಆತ್ಮನು ಯಾರು?[೨] (ಚಕ್ಷುರಿಂದ್ರಿಯವಾದ) ಯಾವುದರಿಂದ (ತಾನು ರೂಪವನ್ನು) ನೋಡುತ್ತಾನೆಯೊ, (ಶ್ರೋತ್ರೇಂದ್ರಿಯವಾದ) ಯಾವುದರಿಂದ (ತಾನು ಶಬ್ದವನ್ನು) ಕೇಳುತ್ತಾನೆಯೊ, (ಘ್ರಾಣೇಂದ್ರಿಯವಾದ) ಯಾವುದರಿಂದ (ತಾನು) ವಾಸನೆಗಳನ್ನು ಆಘ್ರಾಣಿಸುತ್ತಾನೆಯೊ, (ವಾಗಿಂದ್ರಿಯವಾದ) ಯಾವುದರಿಂದ (ತಾನು) ಮಾತನಾಡುತ್ತಾನೆಯೊ, (ಜಿಹ್ವೇಂದ್ರಿಯವಾದ) ಯಾವುದರಿಂದ (ತಾನು) ಸ್ವಾದು-ಅಸ್ವಾದುಗಳನ್ನು ಅರಿಯುತ್ತಾನೆಯೊ.

[ಬ್ರಹ್ಮವಿದ್ಯಾಸಾಧನದಿಂದ ಉತ್ಪನ್ನವಾಗುವ ಸರ್ವಾತ್ಮಭಾವವೆಂಬ ಫಲ ಪ್ರಾಪ್ತಿಯು ವಾಮದೇವನೇ ಮೊದಲಾದ ಆಚಾರ್ಯಪರಂಪರೆಯ ಮೂಲಕ ಶ್ರುತಿಯಿಂದ ಪ್ರಕಾಶಿತವಾಗಿರುವುದು ಮತ್ತು ಬ್ರಹ್ಮಜ್ಞಾನಿಗಳ ಪರಿಷತ್ತಿನಲ್ಲಿ ಅತ್ಯಂತ ಪ್ರಸಿದ್ಧವಾಗಿರುವುದು; ಇದನ್ನು ಅರಿತುಕೊಂಡು ಈ ಕಾಲದ ಬ್ರಹ್ಮಜಿಜ್ಞಾಸುಗಳು ಸಾಧ್ಯಸಾಧನರೂಪವೂ, ಅನಿತ್ಯವೂ, ಜೀವಭಾವದ ವರೆಗೆ ಇರುವುದೂ ಆದ ಸಂಸಾರ ದಿಂದ ಬಿಡುಗಡೆಹೊಂದಲು ಈ ರೀತಿ ಒಬ್ಬರನ್ನೊಬ್ಬರು ಪ್ರಶ್ನಿಸುತ್ತಾರೆ.

೧ಯಾವ ಆತ್ಮನನ್ನು 'ಇವನು ಆತ್ಮನು' ಎಂದು ಸಾಕ್ಷಾತ್ತಾಗಿ ಉಪಾಸಿಸಿ ವಾಮದೇವನು ಅಮೃತನಾದನೊ.

೨ಹೀಗೆ ಅವರು ಒಬ್ಬರನ್ನೊಬ್ಬರು ಪ್ರಶ್ನಿಸುತ್ತಿರುವಾಗ ಹಿಂದೆ ಹೇಳಲ್ಪಟ್ಟ ಪ್ರಾಣಾತ್ಮರ ವಿಷಯವಾದ ಶ್ರುತಿಯ ಸಂಸ್ಕಾರದಿಂದ ಉತ್ಪನ್ನವಾದ ಸ್ಮೃತಿಯು ಅವರಿಗೆ ಉಂಟಾಯಿತು: 'ಬ್ರಹ್ಮವು (ಎಂದರೆ ಅಪರಬ್ರಹ್ಮರೂಪನಾದ ಪ್ರಾಣನು) ಆ ಈ ಪುರುಷನನ್ನು ಮುಂಗಾಲುಗಳ ಮೂಲಕ ಪ್ರವೇಶಿಸಿತು' **ತಂ ಪ್ರಪದಾಭ್ಯಾಂ ಬ್ರಹ್ಮೇಮಂ ಪುರುಷಮ್** (ಐತರೇಯಾರಣ್ಯಕ, ೨,೧,೪) ಮತ್ತು 'ಅವನು ಇದೇ ತಲೆಬುರುಡೆಯನ್ನು ಸೀಳಿಕೊಂಡು ಈ ದ್ವಾರದಿಂದ (ಒಳಗೆ) ಪ್ರವೇಶಿಸಿದನು' **ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ** (೧, ೩, ೧೨); ಇಲ್ಲಿ ಎರಡು ಬ್ರಹ್ಮರು ಎದುರುಬದುರಾಗಿ ಈ ಶರೀರವನ್ನು ಪ್ರವೇಶಿಸಿದರು ಎಂದು ತಿಳಿಯಬರುತ್ತದೆ. ಶರೀರವನ್ನು ಹೊಕ್ಕ ಇವೆರಡು ಆತ್ಮರಲ್ಲಿ ಉಪಾಸನೆಗೆ ಒಬ್ಬನೇ ಆತ್ಮನು ಅರ್ಹನಾಗಿರುತ್ತಾನೆ. ಹಾಗಾದರೆ ಇವರಿಬ್ಬರಲ್ಲಿ ಯಾವನನ್ನು ಉಪಾಸಿಸ ಬೇಕು? ಹೀಗೆ ಈ ಜಿಜ್ಞಾಸುಗಳು ವಿಚಾರಮಾಡುತ್ತಿರುವಾಗ ಪ್ರಾಣಾತ್ಮರ ವಿಷಯವಾಗಿ ಅವರಿಗೆ ಮತ್ತೊಂದು ಆಲೋಚನೆ ಉಂಟಾಯಿತು. ಶರೀರದಲ್ಲಿ ಎರಡು ವಸ್ತುಗಳು ಕಂಡುಬರುತ್ತವೆ: (೧) ನಾವು ಯಾವುದರಿಂದ ಅರಿಯುತ್ತೇವೆಯೊ ಆ ಕರಣ; ಇದು ಅನೇಕ ಭೇದಗಳನ್ನು ಹೊಂದಿರುತ್ತದೆ; (೨) ಕರಣದ ಮೂಲಕ ವಿಷಯವನ್ನು ಅರಿಯುವವನು. ಇವೆರಡು ವಸ್ತುಗಳಲ್ಲಿ ಯಾವುದರಿಂದ ಅರಿಯು ತ್ತೇವೆಯೊ ಅದು ಆತ್ಮನಾಗಲಾರದು. ಹಾಗಾದರೆ ಯಾವುದರಿಂದ ಅರಿಯುತ್ತೇವೆ? ಇದಕ್ಕೆ ಉತ್ತರ **ಯೇನ ವಾ ಪಶ್ಯತಿ** ಎಂಬಲ್ಲಿಂದ ಹೇಳಿದೆ.]

**ಯದೇತದ್ಧೃದಯಂ ಮನಶ್ಚೈತತ್ । ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ—ಸರ್ವಾ-ಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ ॥ ೨ ॥**

ಯತ್ [ಉಕ್ತಂ ಪುರಸ್ತಾತ್] = ಹಿಂದೆ ಯಾವುದು ಹೇಳಲ್ಪಟ್ಟಿದೆಯೊ [ತತ್ = ಅದು] ಏತತ್ ಹೃದಯಂ = ಈ ಹೃದಯವು ಏತತ್ ಮನಃ ಚ = ಮತ್ತು ಈ ಮನಸ್ಸು. ಸಂಜ್ಞಾನಂ = ಸಂಜ್ಞಾನ ಆಜ್ಞಾನಂ = ಆಜ್ಞಾನ ವಿಜ್ಞಾ-

ನಂ=ವಿಜ್ಞಾನ **ಪ್ರಜ್ಞಾನಂ**=ಪ್ರಜ್ಞಾನ **ಮೇಧಾ**=ಮೇಧಸ್ಸು **ದೃಷ್ಟಿಃ**=ದೃಷ್ಟಿ **ಧೃತಿಃ**=ಧೃತಿ **ಮತಿಃ**=ಮನನ **ಮನೀಷಾ**=ಮನನವಿಷಯದಲ್ಲಿ ಸ್ವಾತಂತ್ರ್ಯ **ಜೂತಿಃ**=ಜೂತಿ **ಸ್ಮೃತಿಃ**=ಸ್ಮರಣೆ **ಸಂಕಲ್ಪಃ**=ಸಂಕಲ್ಪ **ಕ್ರತುಃ**=ಅಧ್ಯವ-ಸಾಯ **ಅಸುಃ**=ಅಸು **ಕಾಮಃ**=ತೃಷ್ಣೆ **ವಶಃ**=ವಶ— **ಇತಿ ಏತಾನಿ ಸರ್ವಾ-ಣಿ**=ಹೀಗೆ ಇವೆಲ್ಲವೂ **ಪ್ರಜ್ಞಾನಸ್ಯ**=ಪ್ರಜ್ಞಾನದ **ನಾಮಧೇಯಾನಿ ಭವಂತಿ**=ಹೆಸರುಗಳಾಗಿರುತ್ತವೆ.

**೨.** ಹಿಂದೆ ಯಾವುದು[೧] ಹೇಳಲ್ಪಟ್ಟಿದೆಯೊ ಅದೇ ಈ ಹೃದಯವು ಮತ್ತು ಈ ಮನಸ್ಸು.[೨] ಸಂಜ್ಞಾನ,[೩] ಆಜ್ಞಾನ,[೪] ವಿಜ್ಞಾನ,[೫] ಪ್ರಜ್ಞಾನ,[೬] ಮೇಧಸ್ಸು,[೭] ದೃಷ್ಟಿ,[೮] ಧೃತಿ,[೯] ಮನನ, ಮನನವಿಷಯದಲ್ಲಿ ಸ್ವಾತಂತ್ರ್ಯ, ಜೂತಿ,[೧೦] ಸ್ಮರಣೆ, ಸಂಕಲ್ಪ,[೧೧] ಅಧ್ಯವಸಾಯ, ಅಸು,[೧೨] ತೃಷ್ಣೆ,[೧೩] ವಶ[೧೪]—ಹೀಗೆ ಇವೆಲ್ಲವೂ ಪ್ರಜ್ಞಾನದ ಹೆಸರುಗಳಾಗಿರುತ್ತವೆ.

[ನಾನಾ ಬಗೆಯಾಗಿ ಭಿನ್ನವಾಗಿರುವ ಒಂದೇ ಕರಣವು ಯಾವುದು? ಇದಕ್ಕೆ ಉತ್ತರವನ್ನು ಇಲ್ಲಿ ಹೇಳಿದೆ.

[೧] 'ಪ್ರಾಣಿಗಳ ರೇತಸ್ಸು ಹೃದಯವು, ಹೃದಯದ ರೇತಸ್ಸು ಮನಸ್ಸು' **ಪ್ರಜಾ-ನಾಂ ರೇತೋ ಹೃದಯಂ ಹೃದಯಸ್ಯ ರೇತೋ ಮನಃ** (ಐತರೇಯಾರಣ್ಯಕ, ೨, ೧, ೩) 'ಮನಸ್ಸಿನಿಂದಲೇ ನೀರೂ ವರುಣನೂ ಸೃಷ್ಟಿಸಲ್ಪಟ್ಟರು' **ಮನಸಾ ಸೃಷ್ಟಾ ಆಪಶ್ಚ ವರುಣಶ್ಚ** (ಐತರೇಯಾರಣ್ಯಕ ೨, ೧, ೭) ಮತ್ತು 'ಹೃದಯದಿಂದ ಮನಸ್ಸೂ ಮನಸ್ಸಿನಿಂದ ಚಂದ್ರನೂ (ಹುಟ್ಟಿದರು)' **ಹೃದಯಾನ್ಮನೋ ಮನಸಶ್ಚಂದ್ರಮಾಃ** (೧, ೧, ೪.)

[೨] ಅದು ಒಂದೇ ಆಗಿದ್ದು ಅನೇಕರೂಪಗಳನ್ನು ಹೊಂದಿರುತ್ತದೆ: ಈ ಒಂದೇ ಅಂತಃಕರಣವು ಚಕ್ಷುವಾದರೆ ರೂಪವನ್ನು ನೋಡುತ್ತಾನೆ, ಶ್ರೋತ್ರವಾದರೆ ಕೇಳುತ್ತಾನೆ, ಘ್ರಾಣವಾದರೆ ಆಘ್ರಾಣಿಸುತ್ತಾನೆ ಇತ್ಯಾದಿ. ಆದುದರಿಂದ ಹೃದಯ ಮನಸ್ಸು ಎಂಬ ಶಬ್ದಗಳಿಂದ ವಾಚ್ಯವಾಗಿರುವ ಅಂತಃಕರಣವು ಜ್ಞಾತೃವು ಎಲ್ಲವನ್ನೂ ಅರಿಯುವುದಕ್ಕೆ ಕರಣವಾಗಿರುತ್ತದೆ. ಪ್ರಾಣವು ಈ ಅಂತಃಕರಣದ ಸ್ವರೂಪವಾಗಿರುತ್ತದೆ. ಪ್ರಾಣವೆಂದರೆ ಕರಣಗಳ ಗುಂಪೆಂದು ಹಿಂದೆ ಆರಣ್ಯಕಭಾಗದಲ್ಲಿ ಹೇಳಿದೆ. ಆದುದರಿಂದ ಯಾವುದು ಕಾಲುಗಳ ಮೂಲಕ ಶರೀರವನ್ನು ಪ್ರವೇಶಿಸಿರುವುದೊ ಅದು ತನ್ನ ಜ್ಞಾತೃವಿಗೆ ಅರಿಯಲು ಕರಣವಾಗಿರುವುದರಿಂದ ನಿಜವಾದ ಬ್ರಹ್ಮವಲ್ಲ. ಪರಿಶೇಷನ್ಯಾಯದಿಂದ ಯಾವ ಜ್ಞಾತೃವಿಗೆ ಅರಿಯಲು ಸಾಧನವಾಗಿ ಈ ಹೃದಯಮನೋರೂಪವಾದ ಕರಣದ ಬೇರೆ ಬೇರೆ ವೃತ್ತಿಗಳು ಉಂಟಾಗುವುವೊ ಆ ಜ್ಞಾತೃವೇ ನಮ್ಮ ಆತ್ಮನೆಂದು ಉಪಾಸಿಸಲು ಅರ್ಹನಾಗಿರುತ್ತಾನೆ.

[೩] **ಸಂಜ್ಞಪ್ತಿ, ಚೇತನಭಾವ.**

[೪] **ಆಜ್ಞಪ್ತಿ, ಈಶ್ವರಭಾವ.**

೫ ಕಲಾದಿಗಳ ಜ್ಞಾನ.
೬ ಪ್ರಜ್ಞಪ್ತಿ, ಪ್ರಜ್ಞತೆ.
೭ ಗ್ರಂಥಧಾರಣಸಾಮರ್ಥ್ಯ.
೮ ಇಂದ್ರಿಯಗಳ ಮೂಲಕ ವಿಷಯಗಳನ್ನು ಅರಿಯುವಿಕೆ.
೯ ಶರೀರೇಂದ್ರಿಯಗಳನ್ನು ಎತ್ತಿಹಿಡಿಯುವುದಕ್ಕೆ ಸಾಧನ.
೧೦ ಮನಸ್ಸಿಗೆ ರೋಗಾದಿಗಳಿಂದ ಉಂಟಾಗುವ ದುಃಖತ್ವಭಾವ.
೧೧ ರೂಪಾದಿಗಳ ವರ್ಣಕಲ್ಪನೆ.
೧೨ ಉಸಿರಾಟವೇ ಮೊದಲಾದ ಜೀವನಕ್ರಿಯೆಗಳಿಗೆ ನಿಮಿತ್ತವಾದ ವೃತ್ತಿ.
೧೩ ಸಮೀಪದಲ್ಲಿಲ್ಲದ ವಿಷಯಗಳಿಗಾಗಿ ಆಕಾಂಕ್ಷೆ.
೧೪ ಸ್ತ್ರೀಸಂಗದಲ್ಲಿ ಅಭಿಲಾಷೆ.

ಇವೆಲ್ಲವೂ ಪ್ರಜ್ಞಪ್ತಿಮಾತ್ರನಾದ ದ್ರಷ್ಟೃವಿಗೆ ಅರಿಯಲು ಸಾಧನಗಳಾಗಿರುವುದರಿಂದ ಶುದ್ಧಪ್ರಜ್ಞಾನರೂಪವಾದ ಬ್ರಹ್ಮಕ್ಕೆ ಉಪಾಧಿಗಳಾಗಿರುತ್ತವೆ. ಆ ಉಪಾಧಿಜನಿತಗುಣಗಳ ಹೆಸರುಗಳಾದ ಸಂಜ್ಞಾನವೇ ಮೊದಲಾದುವು ಪ್ರಜ್ಞಾನಕ್ಕೆ ಪರೋಕ್ಷವಾದ ನಾಮಧೇಯಗಳಾಗಿರುತ್ತವೆ, ಸಾಕ್ಷಾತ್ತಾಗಿ ಅಲ್ಲ.]

**ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚ ಮಹಾಭೂತಾನಿ—ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀ-ಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ ಸ್ವೇದ-ಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂ-ಚೇದಂ ಪ್ರಾಣಿ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ; ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋ-ಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥ ೩ ॥**

ಏಷಃ=ಇವನು ಬ್ರಹ್ಮ=ಬ್ರಹ್ಮವು; ಏಷಃ=ಇವನು ಇಂದ್ರಃ=ಇಂದ್ರನು; ಏಷಃ ಪ್ರಜಾಪತಿಃ=ಇವನು ಪ್ರಜಾಪತಿಯು, ಏತೇ ಸರ್ವೇ ದೇವಾಃ=ಈ ಎಲ್ಲ ದೇವತೆಗಳು, ಇಮಾನಿ ಚ ಪಂಚ ಮಹಾಭೂತಾನಿ=ಈ ಪಂಚ ಮಹಾಭೂತಗಳು—ಪೃಥಿವೀ=ಪೃಥ್ವಿ, ವಾಯುಃ=ವಾಯು, ಆಕಾಶಃ=ಆಕಾಶ, ಆಪಃ=ನೀರು, ಜ್ಯೋತೀಂಷಿ=ಅಗ್ನಿ ಇತಿ ಏತಾನಿ=ಇವೆಲ್ಲವೂ; ಇಮಾನಿ ಚ=ಮತ್ತು ಈ ಕ್ಷುದ್ರಮಿಶ್ರಾಣಿ ಇವ=ಕ್ಷುದ್ರಮಿಶ್ರವಾದ ಇತರಾಣಿ ಚ ಇತರಾಣಿ ಚ ಬೀಜಾನಿ=ಬೇರೆ ಬೇರೆ ಕಾರಣಗಳು: ಅಂಡಜಾನಿ ಚ=ಅಂಡಜಗಳು ಜಾರು-ಜಾನಿ ಚ=ಜರಾಯುಜಗಳು ಸ್ವೇದಜಾನಿ ಚ=ಸ್ವೇದಜಗಳು ಉದ್ಭಿಜ್ಜಾನಿ ಚ=

ವೃಕ್ಷಾದಿಗಳು **ಅಶ್ವಾಃ**=ಕುದುರೆಗಳು **ಗಾವಃ**=ಗೋವುಗಳು **ಪುರುಷಾಃ**=ಮನುಷ್ಯರು **ಹಸ್ತಿನಃ**=ಆನೆಗಳು; **ಯತ್ ಕಿಂಚ ಇದಂ ಪ್ರಾಣಿ**=ಮತ್ತು ಇನ್ನು ಯಾವ ಈ ಪ್ರಾಣಿವರ್ಗವಿದೆಯೊ—**ಜಂಗಮಂ ಚ ಪತತ್ರಿ ಚ**=ನಡೆಯುವುದೂ ಹಾರುವುದೂ, **ಯತ್ ಚ ಸ್ಥಾವರಂ**=ಯಾವುದು ಸ್ಥಾವರವೊ **ತತ್ ಸರ್ವಂ**=ಅವೆಲ್ಲವೂ **ಪ್ರಜ್ಞಾನೇತ್ರಂ**=ಪ್ರಜ್ಞಾನೇತ್ರವು, **ಪ್ರಜ್ಞಾನೇ**=ಪ್ರಜ್ಞಾನದಲ್ಲಿ **ಪ್ರತಿಷ್ಠಿತಂ**=ಪ್ರತಿಷ್ಠಿತವಾಗಿರುವುದು; **ಲೋಕಃ ಪ್ರಜ್ಞಾನೇತ್ರಃ**=ಲೋಕವು ಪ್ರಜ್ಞಾನೇತ್ರವು, **ಪ್ರಜ್ಞಾ**=ಪ್ರಜ್ಞೆಯು **ಪ್ರತಿಷ್ಠಾ**=ಪ್ರತಿಷ್ಠೆಯು. **ಪ್ರಜ್ಞಾನಂ**=ಪ್ರಜ್ಞಾನವು **ಬ್ರಹ್ಮ**=ಬ್ರಹ್ಮವು.

**೩.** ಇವನು[೧] ಬ್ರಹ್ಮವು[೨]; ಇವನು ಇಂದ್ರನು;[೩] ಇವನು ಪ್ರಜಾಪತಿಯು;[೪] (ಇವನು) ಈ ಎಲ್ಲ ದೇವತೆಗಳು; (ಇವನು) ಪೃಥ್ವಿ ವಾಯು ಆಕಾಶ ನೀರು ಅಗ್ನಿ ಎಂಬ ಪಂಚಮಹಾಭೂತಗಳು;[೫] ಮತ್ತು ಕ್ಷುದ್ರಮಿಶ್ರವಾದ[೬] ಈ ಬೇರೆ ಬೇರೆ ಕಾರಣಗಳು—ಅಂಡಜಗಳು,[೭] ಜರಾಯುಜಗಳು,[೮] ಸ್ವೇದಜಗಳು, ವೃಕ್ಷಾದಿಗಳು, ಕುದುರೆಗಳು, ಗೋವುಗಳು, ಮನುಷ್ಯರು, ಆನೆಗಳು; ಮತ್ತು (ಕಾಲಿನಿಂದ) ನಡೆಯುವುದೂ ಹಾರಾಡುವುದೂ ಆದ ಇನ್ನು ಯಾವ ಈ ಪ್ರಾಣಿವರ್ಗವಿದೆಯೊ, ಯಾವುದು ಸ್ಥಾವರವೊ ಅದೆಲ್ಲವೂ ಪ್ರಜ್ಞಾನೇತ್ರವು,[೧೦] ಪ್ರಜ್ಞಾನದಲ್ಲಿ ಪ್ರತಿಷ್ಠಿತವಾಗಿರುವುದು;[೧೧] ಲೋಕವು ಪ್ರಜ್ಞಾನೇತ್ರವು,[೧೨] ಪ್ರಜ್ಞೆಯು (ಲೋಕಕ್ಕೆ) ಪ್ರತಿಷ್ಠೆಯು. ಪ್ರಜ್ಞಾನವು ಬ್ರಹ್ಮ.

[ಸರ್ವೋಪಾಧಿವಿಶೇಷರಹಿತವೂ, ಅದ್ವಯವೂ ಆದ ಬ್ರಹ್ಮವು ವಿಶುದ್ಧ ಪ್ರಜ್ಞೆಯೆಂಬ ಉಪಾಧಿಯ ಸಂಬಂಧದಿಂದ ಸರ್ವಜ್ಞವಾಗಿ **ಈಶ್ವರ** ಎಂಬ ಹೆಸರನ್ನು ಪಡೆಯುತ್ತದೆ; ಅದೇ ಸರ್ವಸಾಧಾರಣವಾದ ಅವ್ಯಾಕೃತವೆಂಬ ಜಗದ್ಬೀಜವನ್ನು ಪ್ರವರ್ತಿಸುವಾಗ ಸರ್ವನಿಯಂತೃವಾಗಿರುವುದರಿಂದ **ಅಂತರ್ಯಾಮಿ** ಎಂಬ ಹೆಸರನ್ನು ಪಡೆಯುತ್ತದೆ; ಅದೇ ವ್ಯಾಕೃತಜಗದ್ಬೀಜವಾದ ಬುದ್ಧಿಯೊಂದಿಗೆ ಆತ್ಮಾಭಿಮಾನವನ್ನು ಹೊಂದಿದಾಗ **ಹಿರಣ್ಯಗರ್ಭ** ಎಂಬ ಹೆಸರನ್ನು ಪಡೆಯುತ್ತದೆ; ಅದೇ ಅಂಡದಲ್ಲಿ ಉದ್ಭೂತವಾದ ಪ್ರಥಮಶರೀರವೆಂಬ ಉಪಾಧಿಯುಳ್ಳದ್ದಾಗಿ **ವಿರಾಟ್, ಪ್ರಜಾಪತಿ** ಎಂಬ ಹೆಸರುಗಳನ್ನು ಪಡೆಯುತ್ತದೆ; ಅದೇ ಅಂಡದಿಂದ ಉದ್ಭೂತವಾದ ಅಗ್ನಿಯೇ ಮೊದಲಾದ ಉಪಾಧಿಗಳುಳ್ಳದ್ದಾಗಿ **ದೇವತಾ** ಎಂಬ ಹೆಸರನ್ನು ಪಡೆಯುತ್ತದೆ. ಹೀಗೆ ಬ್ರಹ್ಮನಿಂದ ಹಿಡಿದು ಸ್ತಂಬದ ವರೆಗಿನ ಆಯಾ ಶರೀರಗಳೆಂಬ ಉಪಾಧಿಗಳಲ್ಲಿ ಬ್ರಹ್ಮಕ್ಕೆ ಆಯಾ ನಾಮರೂಪಗಳು ಬರುತ್ತವೆ. ಸರ್ವೋಪಾಧಿಗಳಿಂದ ಭಿನ್ನವಾದ ಅದೊಂದೇ ವಸ್ತುವು ಸರ್ವಪ್ರಾಣಿಗಳಿಂದಲೂ ತಾರ್ಕಿಕರಿಂದಲೂ ಅರಿಯಲ್ಪಡುತ್ತದೆ, ಅನೇಕ ವಿಧವಾಗಿ ಕಲ್ಪಿಸಲ್ಪಡುತ್ತದೆ. 'ಕೆಲವರು ಇವನನ್ನು ಅಗ್ನಿಯೆಂದು ಕರೆಯುವರು; ಮತ್ತೆ ಕೆಲವರು ಮನುವೆಂದು ಕರೆಯುವರು; ಇನ್ನು

ಕೆಲವರು ಪ್ರಜಾಪತಿಯೆಂದು ಕರೆಯುವರು; ಕೆಲವರು ಇವನನ್ನು ಇಂದ್ರನೆಂದೂ, ಮತ್ತೆ ಕೆಲವರು ಪ್ರಾಣನೆಂದೂ, ಇನ್ನು ಕೆಲವರು ಶಾಶ್ವತವಾದ ಬ್ರಹ್ಮವೆಂದೂ ಕರೆಯುವರು' ಏತಮೇಕೇ ವದಂತ್ಯಗ್ನಿಂ ಮನುಮನ್ಯೇ ಪ್ರಜಾಪತಿಮ್ । ಇಂದ್ರಮೇಕೇಽಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್ ॥ (ಮನುಸ್ಮೃತಿ, ೧೨, ೧೨೩).

[1] ಪ್ರಜ್ಞಾನರೂಪನಾದ ಆತ್ಮನು.

[2] ಎಲ್ಲ ಶರೀರಗಳಲ್ಲಿಯೂ ಪ್ರಾಣನಾಗಿಯೂ ಪ್ರಜ್ಞಾತ್ಮನಾಗಿಯೂ ಇರುವ ಅಪರಬ್ರಹ್ಮ ಎಂದರೆ ಹಿರಣ್ಯಗರ್ಭ; ಬೇರೆ ಬೇರೆ ಜಲಾಶಯಗಳಲ್ಲಿ ಪ್ರಕಾಶಿಸುವ ಸೂರ್ಯಪ್ರತಿಬಿಂಬದಂತೆ ಇವನು ಅಂತಃಕರಣಗಳೆಂಬ ಉಪಾಧಿಗಳನ್ನು ಪ್ರವೇಶಿಸಿರುತ್ತಾನೆ.

[3] ಗುಣದಿಂದ; ೧, ೩, ೧೩–೧೪ ನೋಡಿ.

[4] ಇವನಿಂದಲೇ ಅಗ್ನ್ಯಾದಿದೇವತೆಗಳು ಉತ್ಪನ್ನರಾದರು.

[5] ಸರ್ವಶರೀರಗಳಿಗೂ ಉಪಾದಾನವಾಗಿ ಅನ್ನ, ಅನ್ನವನ್ನು ತಿನ್ನುವವನು ಎಂಬ ರೂಪದಲ್ಲಿರುವ ಪೃಥಿವ್ಯಾದಿ ಮಹಾಭೂತಗಳು.

[6] ಕ್ಷುದ್ರವಾದ ಶರೀರಗಳೊಡನೆ ಕೂಡಿರುವ ಸರ್ಪಾದಿಗಳು; ಇವು ಎರಡೆರಡು ರಾಶಿಯಾಗಿ ಮುಂದೆ ತಿಳಿಸುವ ಕಾರಣಗಳು.

[7] ಮೊಟ್ಟೆಯಿಂದ ಹುಟ್ಟುವ ಪಕ್ಷಿಗಳೇ ಮೊದಲಾದುವು.

[8] ಗರ್ಭಕೋಶದಿಂದ ಜನಿಸುವ ಮನುಷ್ಯರೇ ಮೊದಲಾದವರು.

[9] ಬೆವರಿನಲ್ಲಿ ಹುಟ್ಟುವ ಕ್ರಿಮಿಗಳು.

[10] ಪ್ರಜ್ಞಾ ಎಂದರೆ ಪ್ರಜ್ಞಪ್ತಿ (ಅರಿವು); ಅದೇ ಬ್ರಹ್ಮವು. ಯಾವುದರಿಂದ ಪ್ರಚೋದಿಸಲ್ಪಡುವುದೊ (ನೀಯತೇ) ಅಥವಾ ಇರುವಿಕೆಯನ್ನು ಪಡೆಯುವುದೊ ಅದು ನೇತ್ರವು. ಪ್ರಜ್ಞೆಯೇ ಯಾವುದಕ್ಕೆ ನೇತ್ರವೊ ಅದು ಪ್ರಜ್ಞಾನೇತ್ರವು.

[11] ಜಗತ್ತು ಸೃಷ್ಟಿಸ್ಥಿತಿಲಯಕಾಲಗಳಲ್ಲಿ ಪ್ರಜ್ಞಾನವನ್ನೇ ಎಂದರೆ ಬ್ರಹ್ಮವನ್ನೇ ಆಶ್ರಯಿಸಿರುತ್ತದೆ.

[12] ಅರ್ಥವು ಹಿಂದಿನಂತೆಯೇ; ಅಥವಾ ಲೋಕಕ್ಕೆ ಪ್ರಜ್ಞೆಯೇ ನೇತ್ರವಾಗಿರುತ್ತದೆ.]

**ಸ ಏತೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ ಸಮಭವತ್ ॥ ೪ ॥**

ಇತಿ ಐತರೇಯೋಪನಿಷದಿ ತೃತೀಯೋಽಧ್ಯಾಯೇ ಪ್ರಥಮಃ ಖಂಡಃ ॥

ಏತೇನ ಪ್ರಜ್ಞೇನ ಆತ್ಮನಾ=ಈ ಪ್ರಜ್ಞವಾದ ಆತ್ಮರೂಪದಿಂದ ಅಸ್ಮಾತ್ ಲೋಕಾತ್=ಈ ಲೋಕದಿಂದ ಉತ್ಕ್ರಮ್ಯ=ಮೇಲಕ್ಕೇರಿ ಅಮುಷ್ಮಿನ್=ಆ ಸ್ವರ್ಗೇ ಲೋಕೇ=ಸ್ವರ್ಗಲೋಕದಲ್ಲಿ ಸರ್ವಾನ್=ಎಲ್ಲ ಕಾಮಾನ್=ಕಾಮ-ಗಳನ್ನು ಆಪ್ತ್ವಾ=ಹೊಂದಿ ಸಃ=ವಾಮದೇವನು ಅಮೃತಃ ಸಮಭವತ್=ಅಮೃತನಾದನು, ಸಮಭವತ್=ಅಮೃತನಾದನು.

೪. ಈ ಪ್ರಜ್ಞವಾದ ಆತ್ಮರೂಪದಿಂದ[೧] ಈ ಲೋಕದಿಂದ ಮೇಲಕ್ಕೇರಿ ಆ ಸ್ವರ್ಗಲೋಕದಲ್ಲಿ ಸರ್ವಕಾಮಗಳನ್ನು ಹೊಂದಿ ವಾಮದೇವನು[೨] ಅಮೃತನಾದನು, ಅಮೃತನಾದನು.

[[೧] ಯಾವ ಪ್ರಜ್ಞವಾದ ಆತ್ಮರೂಪದಿಂದ ಪೂರ್ವದಲ್ಲಿ ಜ್ಞಾನಿಗಳು ಅಮೃತರಾದರೊ ಅದರಿಂದ.

[೨] ಅಥವಾ ಬ್ರಹ್ಮಜ್ಞಾನಿಯಾದ ಬೇರೊಬ್ಬನು.]

# ನಾಲ್ಕನೆಯ ಅಧ್ಯಾಯ

## ಮೊದಲನೆಯ ಖಂಡ

ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ; ವೇದಸ್ಯ ಮ ಆಣೀ ಸ್ಥಃ; ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನಾಹೋರಾತ್ರಾನ್ ಸಂದಧಾಮಿ; ಋತಂ ವದಿಷ್ಯಾಮಿ, ಸತ್ಯಂ ವದಿಷ್ಯಾಮಿ; ತನ್ಮಾಮವತು, ತದ್ವಕ್ತಾರಮವತು; ಅವತು ಮಾಮವತು ವಕ್ತಾರಮ್, ಅವತು ವಕ್ತಾರಮ್ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಇತಿ ಐತರೇಯೋಪನಿಷದಿ ಚತುರ್ಥೋಽಧ್ಯಾಯೇ ಪ್ರಥಮಃ ಖಂಡಃ ॥

ಮೇ=ನನ್ನ ವಾಕ್=ವಾಕ್ಕು ಮನಸಿ=ಮನಸ್ಸಿನಲ್ಲಿ ಪ್ರತಿಷ್ಠಿತಾ=ಪ್ರತಿಷ್ಠಿತವಾಗಲಿ, ಮೇ ಮನಃ=ನನ್ನ ಮನಸ್ಸು ವಾಚಿ=ವಾಕ್ಕಿನಲ್ಲಿ ಪ್ರತಿಷ್ಠಿತಂ=ಪ್ರತಿಷ್ಠಿತವಾಗಲಿ. ಆವಿಃ=ಹೇ ಸ್ವಪ್ರಕಾಶವಾದ ಬ್ರಹ್ಮವೇ, ಮೇ=ನನಗೆ ಆವೀಃ ಏಧಿ=ಪ್ರತ್ಯಕ್ಷವಾಗು. ಮೇ=ನನಗೆ ವೇದಸ್ಯ ಆಣೀ ಸ್ಥಃ=ವೇದಾರ್ಥವನ್ನು ತರಲು ಸಮರ್ಥರಾಗಿ. ಮೇ ಶ್ರುತಂ=ನಾನು ಕಲಿತ ವೇದವು ಮಾ ಪ್ರಹಾಸೀಃ=[ನನ್ನನ್ನು] ಬಿಡದಿರಲಿ. ಅನೇನ ಅಧೀತೇನ=ಈ ಅಧ್ಯಯನದಿಂದ ಅಹೋರಾತ್ರಾನ್=ಅಹೋರಾತ್ರಿಗಳನ್ನು ಸಂದಧಾಮಿ=ಸಂಯೋಜಿಸುತ್ತೇನೆ. ಋತಂ=ವದಿಷ್ಯಾಮಿ=ಋತವನ್ನು ಹೇಳುತ್ತೇನೆ, ಸತ್ಯಂ ವದಿಷ್ಯಾಮಿ=ಸತ್ಯವನ್ನು ಹೇಳುತ್ತೇನೆ. ತತ್=ಅದು, ಬ್ರಹ್ಮವು ಮಾಂ=ನನ್ನನ್ನು ಅವತು=ಕಾಪಾಡಲಿ; ತತ್=ಅದು ವಕ್ತಾರಂ=ಆಚಾರ್ಯನನ್ನು ಅವತು=ಕಾಪಾಡಲಿ. ಮಾಮ್ ಅವತು, ವಕ್ತಾರಮ್ ಅವತು, ವಕ್ತಾರಮ್ ಅವತು.

ನನ್ನ ವಾಕ್ಕು ಮನಸ್ಸಿನಲ್ಲಿ ಪ್ರತಿಷ್ಠಿತವಾಗಲಿ, ನನ್ನ ಮನಸ್ಸು ವಾಕ್ಕಿನಲ್ಲಿ ಪ್ರತಿಷ್ಠಿತವಾಗಲಿ. ಹೇ ಸ್ವಪ್ರಕಾಶವಾದ ಬ್ರಹ್ಮವೆ, ನನಗೆ ಪ್ರತ್ಯಕ್ಷವಾಗು. (ಹೇ ವಾಙ್ಮನಸ್ಸುಗಳೆ), ನನಗೆ ವೇದಾರ್ಥವನ್ನು ತರಲು ಸಮರ್ಥರಾಗಿ. ನಾನು ಕಲಿತ ವೇದವು ನನ್ನನ್ನು ಬಿಡದಿರಲಿ. ಈ ಅಧ್ಯಯನದಿಂದ ಅಹೋರಾತ್ರಿಗಳನ್ನು ಸಂಯೋಜಿಸುತ್ತೇನೆ. ಋತವನ್ನು ಹೇಳುತ್ತೇನೆ, ಸತ್ಯವನ್ನು ಹೇಳುತ್ತೇನೆ. ಬ್ರಹ್ಮವು ನನ್ನನ್ನು ಕಾಪಾಡಲಿ; ಅದು ಆಚಾರ್ಯನನ್ನು ಕಾಪಾಡಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಮಂತ್ರಗಳ ಅಕಾರಾದಿಸೂಚಿ

# ಉಪನಿಷನ್ಮಾಲೆ

## ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ

| | |
|---|---|
| ಈಶಾವಾಸ್ಯೋಪನಿಷತ್ . . . | ೦·೫೦ |
| ಕೇನೋಪನಿಷತ್ . . . | ೦·೫೦ |
| ಕಠೋಪನಿಷತ್ . . . | ೧·೫೦ |
| ಪ್ರಶ್ನೋಪನಿಷತ್ . . . | ೧·೦೦ |
| ಮುಂಡಕೋಪನಿಷತ್ . . . | ೧·೦೦ |
| ಮಾಂಡೂಕ್ಯೋಪನಿಷತ್ (ಗೌಡಪಾದಕಾರಿಕಾ ಸಹಿತ) . | ೧·೫೦ |
| ತೈತ್ತಿರೀಯೋಪನಿಷತ್ . . . | ೧·೫೦ |

## ಇತರ ಸಂಸ್ಕೃತ-ಕನ್ನಡ ಗ್ರಂಥಗಳು

| | |
|---|---|
| ಲಲಿತಾಸಹಸ್ರನಾಮ . . . | ೪·೦೦ |
| ಶ್ರೀಮದ್ಭಗವದ್ಗೀತಾ . . . | ೩·೫೦ |
| ಶ್ರೀಮದ್ಭಗವದ್ಗೀತಾ (ಮೂಲ ಮತ್ತು ಅನುವಾದ) . | ೨·೦೦ |
| ಸ್ತವಕುಸುಮಾಂಜಲಿ . . . | ೩·೭೫ |
| ಮಾನಸೋಲ್ಲಾಸ . . . | ೨·೦೦ |
| ಅವಧೂತಗೀತಾ . . . | ೧·೫೦ |
| ಅಷ್ಟಾವಕ್ರಗೀತಾ . . . | ೧·೫೦ |
| ವಿಷ್ಣುಸಹಸ್ರನಾಮ . . . | ೧·೦೦ |
| ಶಿವಾನಂದಲಹರೀ . . . | ೦·೫೦ |
| ಸೌಂದರ್ಯಲಹರೀ . . . | ೦·೫೦ |
| ಶರಣಾಗತಿಗದ್ಯ (ಶ್ರೀಮದ್ರಾಮಾನುಜಾಚಾರ್ಯ ವಿರಚಿತ) . | ೦·೫೦ |

ಬೆಲೆ: ರೂ. ೦·೫೦